# ಮೈಸೂರು ವಿಶ್ವವಿದ್ಯಾನಿಲಯ

## ಪ್ರಚಾರ ಪುಸ್ತಕ ಮಾಲೆ

೧. ಖಗೋಳಶಾಸ್ತ್ರ ಪ್ರವೇಶ-

ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ ಎಸ್ ಸಿ.

೨. ಸಮಾಜದ ರೋಗ ರುಜಿನಗಳು-

ಜಿ. ಹನುಮಂತರಾವ್, ಎಂ.ಎ.

೩. ತೆರಿಗೆ-ವಿ. ಆರ್. ಸುಬ್ಬರಾವ್, ಎಂ.ಎ.

೪. ನವರತ್ನಗಳು-ಎಚ್. ಸುಬ್ಬಜೋಯಿಸ್, ಎಂ.ಎಸ್ ಸಿ.

೫. ನಮ್ಮ ಹಳ್ಳಿಗಳು-ಜಿ. ಎನ್. ಕೃಷ್ಣಮೂರ್ತಿ, ಎಂ.ಎ

೬. ಕುಮಾರವ್ಯಾಸ-ಎಸ್. ವಿ. ರಂಗಣ್ಣ, ಎಂ.ಎ.

೭. ಹಂಪೆಯ ಹರಿಹರ-ಡಿ. ಎಲ್. ನರಸಿಂಹಾಚಾರ್, ಎಂ.ಎ

೮. ಕನ್ನಡಸಾಹಿತ್ಯ-ಕೆ. ವೆಂಕಟರಾಮಪ್ಪ, ಎಂ.ಎ.

೯. ವಿದ್ಯುಚ್ಛಕ್ತಿಯ ವೈಭವ-ಬಿ. ಎ. ಕೃಷ್ಣಸ್ವಾಮಿರಾವ್,

ಎಂ.ಎಸ್ ಸಿ.

೧೦. ಪಂಪ-ತೀ. ನಂ. ಶ್ರೀಕಂಠಯ್ಯ, ಎಂ.ಎ.

೧೧. ಪ್ರಾಣಿಜೀವನ-ಎ. ನಾರಾಯಣರಾವ್, ಎಂ.ಎಸ್ ಸಿ.

೧೨. ಕನಸುಗಳು-ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.

೧೩. ಮದುವೆ-ನಾ. ಕಸ್ತೂರಿ, ಎಂ.ಎ., ಬಿ.ಎಲ್.

೧೪. ನಮ್ಮ ಆರ್ಥಿಕ ದೃಷ್ಟಿ-ಎಸ್. ಗೋಪಾಲಸ್ವಾಮಿ, ಎಂ.ಎ

೧೫. ವಾಯುಗುಣ-ಕೆ. ಶೇಷಾದ್ರಿ ಅಯ್ಯಂಗಾರ್,

ಎಂ.ಎಸ್ ಸಿ., ಎಲ್ ಎಲ್.ಬಿ.

೧೬. ಬೆಳಕು-ಟಿ. ಎಸ್. ಸುಬ್ಬರಾಯ, ಎಂ.ಎಸ್ ಸಿ.

೧೭. ಕರ್ನಾಟಕ ಕಾದಂಬರಿ-ವಿ. ಸೀತಾರಾಮಯ್ಯ, ಎ.ಂಎ.

---

ಸೋಲ್ ಏಜೆಂಟ್ :

ಎಂ. ಆರ್. ಲಕ್ಷ್ಮೀನಾರಾಯಣ,

ಬುಕ್ ಸೆಲರ್, ಲ್ಯಾನ್ಸ್‌ಡೌನ್ ಬಿಲ್ಡಿಂಗ್ಸ್, ಮೈಸೂರು

ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ - ೩೯

# ಮಕ್ಕಳ ಭಾವಜೀವನ

ಬಿ. ಕುಪ್ಪುಸ್ವಾಮಿ ನಾಯಿಡು, ಎಂ.ಎ.




ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

ಮೈಸೂರು

೧೯೪೩

# ಮುನ್ನುಡಿ

ಈ ಪ್ರಚಾರಪುಸ್ತಕಮಾಲೆ ಮೂರು ವರ್ಷಗಳ ಹಿಂದೆ ಪ್ರಾರಂಭವಾಯಿತು. ಅತಿ ಸುಲಭವಾದ ಬೆಲೆಯಿಟ್ಟು ಇಂಥ ಪುಟ್ಟ ಪುಸ್ತಕಗಳನ್ನು ಹೊರಡಿಸಿದರೆ, ಅವನ್ನು ಓದಿ ಮೆಚ್ಚುವವರು ಮೈಸೂರಿನ ಜನರಲ್ಲಿ ಬಹುವಾಗಿ ದೊರೆಯುವರೆಂಬ ಭರವಸೆಯೇ ಈ ಪ್ರಯತ್ನಕ್ಕೆ ಪ್ರೇರಕ. ಮೊಟ್ಟಮೊದಲು ಮೈಸೂರು ವಿಶ್ವವಿದ್ಯಾನಿಲಯ ಕೈಕೊಂಡ ಈ ಹೊಸ ಮಾರ್ಗದ ಉದ್ಯಮವು ಅದನ್ನು ಏರ್ಪಡಿಸಿದವರ ಅತ್ಯಂತ ನಿರೀಕ್ಷೆಯನ್ನೂ ಮೀರಿ ಫಲಕಾರಿಯಾಗಿದೆಯೆಂದು ದಿಟವಾಗಿ ಹೇಳಬಹುದು. ಈ ಮೂರು ವರ್ಷಗಳಲ್ಲಿ ೩೪ ಪುಸ್ತಕಗಳು ಪ್ರಕಟವಾಗಿವೆ. ಇವುಗಳಲ್ಲಿ ೧೨ ಸಾಹಿತ್ಯಕ್ಕೆ ಸಂಬಂಧಪಟ್ಟವು; ೧೧ ಭೌತ ಮತ್ತು ಜೀವವಿಜ್ಞಾನಗಳನ್ನು ಕುರಿತವು; ಉಳಿದವನ್ನು ಸಾಮಾಜಿಕಶಾಸ್ತ್ರಗಳ ಗುಂಪಿಗೆ ಸೇರಿಸಬಹುದು. ಇವುಗಳ ವಿಷಯಕ್ಷೇತ್ರವು ವಿಶಾಲವಾದದ್ದು. ಕನ್ನಡದ ವಿಚಾರದಲ್ಲಿ ಯಾರ ಮಾತಿಗೆ ಮನ್ನಣೆಯಿದೆಯೋ ಅಂಥ ಮಹನೀಯರು ಈ ಪುಸ್ತಕಗಳನ್ನು ಅತ್ಯುತ್ಸಾಹದಿಂದ ಬರಮಾಡಿಕೊಂಡಿದ್ದಾರೆ. ಈ ಮಾಲೆಯಲ್ಲಿ ಹೊಸದೊಂದು ಪುಸ್ತಕ ಹೊರಬಿದ್ದ ದಿನವೇ ಸುಮಾರು ೬೦೦ ಪ್ರತಿಗಳು ಮಾರಾಟವಾಗುತ್ತವೆ; ಈ ಮೂರು ವರ್ಷಗಳ ಅವಧಿಯಲ್ಲಿ ಸುಮಾರು ೬೦,೦೦೦ ಪ್ರತಿಗಳು ವಿಕ್ರಯವಾಗಿವೆ. ಈ ಪುಸ್ತಕಮಾಲೆಯನ್ನು ಪ್ರಾರಂಭಿಸಿದವರು ಮೈಸೂರು ವಿಶ್ವವಿದ್ಯಾನಿಲಯದ ವೈಸ್-ಛಾನ್ಸೆಲರ್ ಪದವಿಯಿಂದ ಈಗತಾನೆ ವಿಶ್ರಾಂತಿ ಪಡೆದಿರುವ ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾಯರು;

ಇದು ಯುಕ್ತವಾಗಿಯೇ ಇಷ್ಟೊಂದು ಜನಪ್ರಿಯವಾಗಿರುವು ದನ್ನು ನೋಡಿ ಅವರಿಗೆ ತುಂಬ ತೃಪ್ತಿಯುಂಟಾಗಿರಬೇಕು. ಈ ಪುಸ್ತಕಗಳನ್ನು ಯಾವ ಪ್ರತಿಫಲವೂ ಇಲ್ಲದೆ ಬರೆದು ಕೊಟ್ಟಿರುವ ಗ್ರಂಥಕರ್ತರಿಗೆ ಮೈಸೂರು ವಿಶ್ವವಿದ್ಯಾನಿಲಯದ ವಂದನೆಗಳು ಸಲ್ಲಬೇಕಾಗಿವೆ. ಈ ಮಾತುಗಳನ್ನು ಮುಗಿಸು ವುದಕ್ಕೆ ಮುಂಚೆ ಈ ಮಾಲೆಯ ಪ್ರಧಾನ ಸಂಪಾದಕರಾದ ಶ್ರೀಮಾನ್ ಜಿ. ಹನುಮಂತರಾಯರನ್ನು ಕುರಿತು ಮೆಚ್ಚಿಕೆಯ ಮಾತೊಂದನ್ನು ನಾನು ಆಡದಿದ್ದರೆ ಲೋಪವಾದೀತು. ಸಂಪಾ ದಕ ಕಾರ್ಯದಲ್ಲಿ ಇವರು ಸಲ್ಲಿಸಿರುವ ಕಾಲ, ಶಕ್ತಿ, ಶ್ರದ್ಧೆ ಇವು ಎಷ್ಟೆಂಬುದು ಅವರ ದುಡಿಮೆಯನ್ನು ಹತ್ತಿರದಿಂದ ನೋಡಿ ದವರಿಗೆ ಮಾತ್ರ ಗೊತ್ತಾಗಬಲ್ಲುದು. ಮೈಸೂರು ವಿಶ್ವವಿದ್ಯಾ ನಿಲಯದ ಪ್ರಚಾರಪುಸ್ತಕಮಾಲೆ ಇಂದಿನಂತೆಯೇ ಮುಂದೆಯೂ ಬಹುಕಾಲ ಜನಪ್ರಿಯವಾಗಿ ನಿಲ್ಲಲೆಂದು ಹಾರೈಸುತ್ತೇನೆ.

ಮೈಸೂರು,
ತಾ|| ೨೪-೪-೧೯೪೨.

**ಇ. ಜಿ. ಮೆಕಾಲ್ಪೈನ್**
ವೈಸ್-ಛಾನ್ಸೆಲರ್

# ಪೀಠಿಕೆ.

ಹಾಸನ, ತಿರಮಕೂಡಲುನರಸೀಪುರ, ಹೊಳೆನರಸೀಪುರ ಈ ಸ್ಥಳಗಳಲ್ಲಿ ವಿಶ್ವವಿದ್ಯಾನಿಲಯದ ಅಧ್ಯಾಪಕಸಂಘದ ಪರವಾಗಿ ಮಕ್ಕಳ ಮನೋಭಾವಗಳ ವಿಷಯವನ್ನು ಕುರಿತು ನಾನು ಕೊಟ್ಟ ಉಪನ್ಯಾಸಗಳನ್ನು ಈ ಪುಸ್ತಕರೂಪದಲ್ಲಿ ಪ್ರಕಟಿಸಿದೆ.

ಮನಶ್ಶಾಸ್ತ್ರದಲ್ಲಿ ನನಗೆ ಅಭಿರುಚಿಯನ್ನು ಉಂಟುಮಾಡಿದ ಪ್ರೊಫೆಸರ್ ಎಂ. ವಿ. ಗೋಪಾಲಸ್ವಾಮಿಯವರಿಗೆ ನನ್ನ ಕೃತಜ್ಞತೆಯನ್ನು ತೋರಿಸಲು ನನಗೆ ಬಹಳ ಸಂತೋಷಕರವಾಗಿದೆ.

ಈ ಪುಸ್ತಕವನ್ನು ಬರೆಯಲು ಪ್ರೋತ್ಸಾಹಕೊಟ್ಟ ಶ್ರೀಮಾನ್ ಸಿ. ರಂಗಾಚಾರ್ಯರಿಗೂ ಮತ್ತು ಶ್ರೀಮಾನ್ ಎನ್. ಎಸ್. ನಾರಾಯಣಶಾಸ್ತ್ರಿಯವರಿಗೂ ನನ್ನ ವಂದನೆಗಳು. ಈ ಪುಸ್ತಕವನ್ನು ಬರೆಯುವಾಗ ಅನೇಕ ಉಪಯುಕ್ತವಾದ ಸಲಹೆಗಳನ್ನು ಕೊಟ್ಟಿದ್ದಕ್ಕಾಗಿ ಶ್ರೀಮಾನ್ ಹನುಮಂತರಾಯರಿಗೆ ನಾನು ಕೃತಜ್ಞನಾಗಿದ್ದೇನೆ.

ಈ ಪುಸ್ತಕವನ್ನು ಬರೆಯಲು ಸಹಾಯಮಾಡಿದ ನನ್ನ ಮಿತ್ರರಾದ ಶ್ರೀಮಾನ್ ಎನ್. ಸೀತಾರಾಮಶಾಸ್ತ್ರಿ, ಶ್ರೀಮಾನ್ ಎನ್. ಸಿ. ಶಂಕರನಾರಾಯಣರಾವ್ ಮತ್ತು ಶ್ರೀಮಾನ್ ಕೆ. ವೆಂಕಟರಮಣನ್‌ರವರಿಗೂ ನಾನು ಚಿರಋಣಿ.

**ಬಿ. ಕುಪ್ಪುಸ್ವಾಮಿ ನಾಯಿಡು.**

## ವಿಷಯಾನುಕ್ರಮಣಿಕೆ

# ಮಕ್ಕಳ ಭಾವಜೀವನ

## ೧. ಪ್ರವೇಶ

ಮನಶ್ಶಾಸ್ತ್ರವು ಪ್ರಾಣಿಗಳ ನಡವಳಿಕೆಯ ರಹಸ್ಯವನ್ನು ಕಂಡುಹಿಡಿಯುವ ವಿಜ್ಞಾನ. ಸಾಮಾನ್ಯವಾಗಿ ಪ್ರತಿಯೊಂದು ಜೀವಿಯೂ ತನ್ನ ಆವರಣಕ್ಕೆ ಅನುಗುಣವಾಗಿ ಹೊಂದಿಕೊಂಡು ತನ್ನ ಜೀವನವನ್ನು ನಡೆಸುತ್ತದೆ. ಅದರ ಚರ್ಯೆ ಅಥವಾ ನಡವಳಿಕೆಯನ್ನು ಅದರ ವರ್ತನೆಯೆಂದು ಕರೆಯಬಹುದು. ವರ್ತನೆಗೂ ಅದರ ಕಾರಣಕ್ಕೂ ಪಾರಿಭಾಷಿಕ ಶಬ್ದಗಳಿವೆ. ವರ್ತನೆಯ ಕಾರಣ ಪ್ರಚೋದನೆ. ಪ್ರಚೋದನೆಯಿಂದ ಉಂಟಾಗುವ ವರ್ತನೆ ಪ್ರತಿಕ್ರಿಯೆ. ಜೀವಿಗಳ ವರ್ತನೆಯನ್ನು ವಿಭಜನೆ ಮಾಡಿ ಯಾವ ಪ್ರತಿಕ್ರಿಯೆಗೆ ಯಾವ ಪ್ರಚೋದನೆ ಕಾರಣವೆಂಬುದನ್ನು ನಿರ್ಣಯಿಸುವುದು ಮನಶ್ಶಾಸ್ತ್ರದ ಮುಖ್ಯ ಕೆಲಸ.

ಯಾವ ಜೀವಿಯಲ್ಲಾದರೂ ಆಗಲಿ ಅದರ ಒಂದೊಂದು ವರ್ತನೆಗೂ ಸಂಬಂಧಪಟ್ಟಂತೆ ಒಂದೊಂದು ಮನೋವೃತ್ತಿ ಇರುತ್ತದೆ. ಮೂಗುಪ್ರಾಣಿಗಳ ಮತ್ತು ಸಣ್ಣ ಮಕ್ಕಳ ಮನೋವೃತ್ತಿಯನ್ನು ನಾವು ಊಹಿಸಿ ತಿಳಿಯಬೇಕೇ ಹೊರತು, ನೇರವಾಗಿ ಅವರ ಹೇಳಿಕೆಗಳ ಮೂಲಕ ತಿಳಿಯುವುದು ಅಸಾಧ್ಯ. ಆದರೆ ವಯಸ್ಕರು ತಮ್ಮ ಚಿತ್ತವೃತ್ತಿಗಳ ವಿಷಯವಾಗಿ ಆಡುವ ಮಾತುಗಳಿಂದ ಕೊಡುವ ಹೇಳಿಕೆಗಳಿಂದ ಅವರ ಚಿತ್ತವೃತ್ತಿಗಳನ್ನು ತಿಳಿಯಬಹುದು. ನಮ್ಮ ಸ್ವಂತ ಮನೋವೃತ್ತಿಗಳನ್ನಂತೂ ನಾವೇ ನಮ್ಮ ಅಂತರಂಗ ಪರಿಶೀಲನೆಯ ಮೂಲಕ ತಿಳಿಯಬಹುದು.

ವರ್ತನೆಯ ಪರಿಶೀಲನೆ (ಅವೇಕ್ಷಣ) ಮತ್ತು ಅಂತರಂಗ ಪರಿಶೀಲನೆ ಇವೆರಡರ ಮೂಲಕವಾಗಿ ಆದಿಯಿಂದಲೂ ಮಾನವನು ತನ್ನ ಮತ್ತು ಇತರರ ಮನೋಭಾವನೆಗಳನ್ನೂ ವರ್ತನೆಗಳನ್ನೂ ಅರಿಯುತ್ತಿರುವನು. ಆದರೆ ನಮ್ಮ ದೇಶದಲ್ಲಿಯೂ ಪಾಶ್ಚಾತ್ಯ ದೇಶಗಳಲ್ಲಿಯೂ ಮನೋಭಾವಗಳ ತತ್ವವನ್ನು ಕಂಡು ಹಿಡಿಯಲು ಈಚೀಚಿನವರೆಗೂ ವಿಶೇಷವಾಗಿ ಚಿಂತನೆಯ ಮಾರ್ಗವನ್ನೇ ಅವಲಂಬಿಸುತ್ತಿದ್ದರು. ಇತರ ಪ್ರಾಣಿಗಳ ವರ್ತನೆ ಮತ್ತು ಸಣ್ಣ ಮಕ್ಕಳ ವರ್ತನೆಗಳನ್ನು ಪರೀಕ್ಷಿಸುತ್ತಿರಲಿಲ್ಲ. ಸಾಧಾರಣವಾಗಿ ಮನೋಭಾವಗಳ ಸ್ವರೂಪವನ್ನು ಕಂಡುಹಿಡಿಯಲು ನಮ್ಮ ಭಾವಗಳಲ್ಲಿ ನಾವೇ ಒಳಹೊಕ್ಕು ಪರಿಶೀಲಿಸುವುದೇ ಮುಖ್ಯ ಮಾರ್ಗವೆಂದು ಮನಶ್ಶಾಸ್ತ್ರಜ್ಞರು ಪರಿಗಣಿಸುತ್ತಿದ್ದರು. ಈಗ್ಗೆ ಸುಮಾರು ಎಪ್ಪತ್ತೈದು ವರ್ಷಗಳಿಂದ ಮನೋವೃತ್ತಿಯನ್ನು ಪರೀಕ್ಷಿಸುವುದಕ್ಕೆ ಇತರ ವಿಜ್ಞಾನಗಳಂತೆ ಮನಶ್ಶಾಸ್ತ್ರವೂ ಪ್ರಾಯೋಗಿಕ ವಿಧಾನವನ್ನು ಉಪಯೋಗಿಸುತ್ತಿದೆ. ಪ್ರಾಯೋಗಿಕ ಮಾರ್ಗದ ಮೂಲಕ ವರ್ತನೆಗಳನ್ನೂ ಚಿತ್ತವೃತ್ತಿಗಳನ್ನೂ ಸ್ವಲ್ಪಮಟ್ಟಿಗೆ ನಿಷ್ಕೃಷ್ಟವಾಗಿ ಪರಿಶೀಲನ ಮಾಡಲು ಸಾಧ್ಯವಾಗಿದೆ. ಪ್ರಾಯೋಗಿಕ ಮಾರ್ಗವು ಪರಿಶೀಲನವನ್ನು ನಿರ್ದುಷ್ಟವಾಗಿಯೂ ಪೂರ್ವಗ್ರಹಗಳ ಬಾಧೆಗೆ ಈಡಾಗದಂತೆಯೂ ಮಾಡಿ ನಮ್ಮ ಜ್ಞಾನವನ್ನು ಹೆಚ್ಚಿಸುವುದು.

ಮನುಷ್ಯೇತರ ಪ್ರಾಣಿಗಳನ್ನೂ ಸಣ್ಣ ಮಕ್ಕಳನ್ನೂ ಪರೀಕ್ಷಿಸಿದರೆ ವರ್ತನೆಯ ತತ್ವಗಳು ನಮಗೆ ಸುಲಭವಾಗಿ ಗೊತ್ತಾಗುವುವು. ವಯಸ್ಕರ ವರ್ತನೆಯು ಬಹಳ ತೊಡಕಾದುದು; ವಿದ್ಯೆ, ಅನುಭವ, ಸಾಂಘಿಕಸಾಂಪ್ರದಾಯ—ಅವುಗಳ ಪ್ರಭಾವಕ್ಕೆ ಸಿಕ್ಕಿ ಅದು ಅತಿ ತೊಡಕಾದುದಾಗಿದೆ. ಯಾವ

ವರ್ತನೆಗೆ ಯಾವುದು ಪ್ರಚೋದಕ ಎಂದು ಕಂಡುಹಿಡಿಯು ವುದು ಬಹಳ ಕಷ್ಟ. ಆದರೆ ಸಣ್ಣಮಕ್ಕಳನ್ನು ಜಾಗರೂಕತೆ ಯಿಂದ ಪರೀಕ್ಷಿಸಿದರೆ ಯಾವ ಪ್ರಚೋದನೆ ಎಂಥಾ ಪ್ರತಿಕ್ರಿಯೆ ಯನ್ನು ಉಂಟುಮಾಡುತ್ತದೆ ಎಂಬುದನ್ನು ತಿಳಿಯುವುದು ಅಷ್ಟು ಕಷ್ಟವಲ್ಲ. ಮಕ್ಕಳ ವರ್ತನೆಯನ್ನು ಪರಿಶೀಲಿಸುವುದು ವಿದ್ಯಾ ಭ್ಯಾಸದ ದೃಷ್ಟಿಯಿಂದಲೂ ಅತಿ ಮುಖ್ಯವಾದುದು.

ಬಾಲ್ಯಾವಸ್ಥೆಯು ಶೀಲರಚನೆಗೆ ಬಹು ಮುಖ್ಯವಾದ ಕಾಲ. ಈ ಕಾಲದಲ್ಲಿ ಮಗು ಏನನ್ನು ಅಭ್ಯಾಸಮಾಡುತ್ತದೆಯೋ ಅದು ಜೀವಾಂತ್ಯದವರೆಗೂ ಅದರ ನಡತೆಯನ್ನು ನಿರ್ಧರಿಸುವುದು. ಶ್ವಪಚತನ, ಸುಳ್ಳುಹೇಳುವುದು ಆಗ ಅಭ್ಯಾಸವಾದರೆ ಶುಚಿ ನೈರ್ಮಲ್ಯ, ಪ್ರಾಮಾಣಿಕತೆ-ಇವುಗಳನ್ನು ವಯಸ್ಸಾದಮೇಲೆ ಕಲಿಸಲಾಗುವುದಿಲ್ಲ. ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ ! ಒಳ್ಳೆಯ ಗುಣಗಳು ಬಾಲ್ಯದಲ್ಲಿಯೇ ಮೊಳೆಯದಿದ್ದರೆ ಆಮೇಲೆ ವಿಕಾಸಹೊಂದಲಾರವು. ಆದುದರಿಂದ ನಮ್ಮ ಸಮಾಜವು ಒಳ್ಳೆಯರೀತಿಯಲ್ಲಿ ಮುಂದುವರಿಯಬೇಕಾದರೆ ನಾವು ಸಣ್ಣ ಮಕ್ಕಳನ್ನು ಬಹು ಜಾಗರೂಕತೆಯಿಂದ ನೋಡಿಕೊಳ್ಳಬೇಕು. ನಮ್ಮ ನಡತೆಗೆ ಭಯ ಕೋಪಗಳು ಪ್ರಚೋದಕಗಳಾಗಿರುವಷ್ಟು ಇನ್ನು ಯಾವ ಮನೋವ್ಯಾಪಾರವೂ ಪ್ರಚೋದಕವಾದುದಲ್ಲ. ಮಕ್ಕಳಲ್ಲಂತೂ ಭಾವಗಳು ಇನ್ನೂ ವಿಶೇಷರೀತಿಯಾಗಿ ಪರಿಣಾ ಮಕಾರಿಗಳಾಗಿವೆ. ಮಕ್ಕಳ ಬೆಳವಣಿಗೆ, ಆರೋಗ್ಯ ಮತ್ತು ಶೀಲರಚನೆ-ಈ ಮೂರರ ದೃಷ್ಟಿಯಿಂದಲೂ ಮಕ್ಕಳ ಭಾವ (emotional)ಜೀವನವನ್ನು ಪರಿಶೀಲಿಸುವುದು ಅತ್ಯಾವಶ್ಯಕ. ಈ ಪುಸ್ತಕದಲ್ಲಿ ಮಕ್ಕಳ ಭಾವಗಳನ್ನೂ ಅವುಗಳನ್ನು ವ್ಯವಸ್ಥೆಗೊ ಳಿಸುವ ವಿಧಾನಗಳನ್ನು ನಿವರಿಸಲು ಯತ್ನಿಸಿದೆ.

# ೨. ಆಗತಾನೆ ಹುಟ್ಟಿದ ಮಗುವಿನ ಮನೋಭಾವಗಳು

ಆಗತಾನೇ ಹುಟ್ಟಿದ ಮಗುವನ್ನು ನಾವು ನೋಡಿದರೆ ಉಸಿರಾಡುವುದು, ಕೈಕಾಲು ಒದರುವುದು, ಅಳುವುದು; ಇವು ವಿನಾ ಅದು ಇನ್ನೇನನ್ನೂ ಮಾಡಲಾರದು. ಹೀಗಿರುವ ಮಗು ಬೆಳೆಯುತ್ತಾ ಬೆಳೆಯುತ್ತಾ ದೇಹಶಕ್ತಿ ಬುದ್ಧಿಶಕ್ತಿ ಕಾರ್ಯಶಕ್ತಿಗಳನ್ನು ಪಡೆದು ಸ್ವಾವಲಂಬಿಯಾದ ವ್ಯಕ್ತಿಯಾಗುವುದು. ಹೀಗೆ ಆಗಲು ಅದಕ್ಕೆ ಹತ್ತಿಪ್ಪತ್ತು ವರ್ಷಗಳು ಬೇಕು. ಪ್ರಾಣಿಗಳಲ್ಲೆಲ್ಲಾ ಮಾನವನ ಶೈಶವ ಮತ್ತು ಬಾಲ್ಯಾವಸ್ಥೆಗಳು ಅತಿ ದೀರ್ಘವಾದುವು. ಸಾಧಾರಣವಾಗಿ ಪ್ರತಿಯೊಬ್ಬ ಹೆಂಗಸಿನ ಅಥವಾ ಗಂಡಸಿನ ದೇಹದ ಮತ್ತು ಮನಸ್ಸಿನ ಬೆಳವಣಿಗೆ ಸುಮಾರು ಹದಿನೆಂಟು ಅಥವಾ ಇಪ್ಪತ್ತು ವರ್ಷ ವಯಸ್ಸಿನ ವರೆಗೂ ನಡೆಯುವುದು. ಹೀಗೆ ಯಾವ ಪ್ರಾಣಿಯಲ್ಲಿ ಬಾಲ್ಯಾವಸ್ಥೆಯು ಅತಿ ದೀರ್ಘವಾದುದೋ ಅದು ಪ್ರಾಣಿವರ್ಗದಲ್ಲಿ ಅತ್ಯಂತ ಮೇಲಿನ ಅಂತಸ್ತಿಗೆ ಸೇರಿದ ಪ್ರಾಣಿಯೆಂದು ಹೇಳಬಹುದು. ಬಾಲ್ಯಾವಸ್ಥೆಯ ಕಾಲವು ಒಂದೊಂದು ಪ್ರಾಣಿ ವರ್ಗದಲ್ಲಿಯೂ ಒಂದೊಂದು ಬಗೆಯಾಗಿರುವುದು. ಸಣ್ಣ ಪ್ರಾಣಿಗಳಾದ ಕ್ರಿಮಿಕೀಟಗಳಲ್ಲಿ ಬಾಲ್ಯಾವಸ್ಥೆಯೇ ಇಲ್ಲ. ಹೀಗಿರುವುದರಿಂದ ಅವು ತಮ್ಮ ಜೀವಮಾನದಲ್ಲಿ ಏನನ್ನೂ ಕಲಿಯಲಾರವು. ಆದರೆ ಉಚ್ಚವರ್ಗದ ಪ್ರಾಣಿಗಳಾದ ನಾಯಿ ಬೆಕ್ಕು ಮೊದಲಾದುವಲ್ಲಿ ಬಾಲ್ಯಾವಸ್ಥೆಯು ಸ್ವಲ್ಪ ದೀರ್ಘವಾಗಿರುತ್ತದೆ. ಆದರಿಂದಲೇ ಅವು ತಮ್ಮ ಅನುಭವದ ಮೂಲಕ ತಮ್ಮ ಶಕ್ತಿಯನ್ನು ಹೆಚ್ಚಿಸಿಕೊಂಡು ಹೊಸ ಹೊಸ ಆವರಣದಲ್ಲಿ ಬೇರೆ

ಬೇರೆ ರೀತಿಯಲ್ಲಿ ವರ್ತಿಸುವುದನ್ನು ಕಲಿಯಲು ಸಾಧ್ಯವಾಗಿದೆ. ಮನುಷ್ಯನಲ್ಲಿ ಬಾಲ್ಯಾವಸ್ಥೆಯು ಎಲ್ಲ ಪ್ರಾಣಿ ವರ್ಗಗಳಿಗಿಂತಲೂ ದೀರ್ಘವಾಗಿರುವುದರಿಂದ ಅವನ ಕಲಿವಿಗೆ ಪಾರವೇ ಇಲ್ಲ; ಅವನ ಕ್ರಿಯಾಶಕ್ತಿ ಅಪರಿಮಿತವಾಗಿದೆ.

ಮನುಷ್ಯಜೀವನದಲ್ಲಿ ದೈಹಿಕ ಮತ್ತು ಮಾನಸಿಕ ಬೆಳವಣಿಗೆಗಳು ಮೊದಲಿನ ಐದುವರ್ಷಗಳಲ್ಲಿ—ಅದರಲ್ಲಿಯೂ ಮೊದಲಿನ ಎರಡು ವರ್ಷಗಳಲ್ಲಿ ಅತಿ ತೀವ್ರವಾಗಿ ಮುಂದರಿಯುವುವು. ಆದುದರಿಂದಲೇ ಈ ಐದು ವರ್ಷಗಳು ಮಗುವಿನ ಬೆಳವಣಿಗೆಯ ದೃಷ್ಟಿಯಿಂದ ಬಹಳ ಮುಖ್ಯವಾದುವು. ನಾವು ಮಕ್ಕಳನ್ನು ಈ ಸಮಯದಲ್ಲಿ ಆಧುನಿಕ ವೈಜ್ಞಾನಿಕಮಾರ್ಗವನ್ನನುಸರಿಸಿ ಬೆಳಸುವುದು ಅತ್ಯಾವಶ್ಯಕ. ಈಗೀಗ ಶಿಶುಸಂರಕ್ಷಣಾಲಯಗಳೂ ಶಿಶುವಿಹಾರಗಳೂ ಸ್ಥಾಪಿತವಾಗುತ್ತಿರುವುದು ಇದಕ್ಕಾಗಿಯೇ.

ಒಂದು ತಿಂಗಳೊಳಗಿರುವ ಮಗುವನ್ನು ಪರಿಶೀಲಿಸಿದರೆ ಅದು ನೋಡುವುದಕ್ಕೆ ಚೈತನ್ಯವಿಲ್ಲದಂತೆ ತೋರಿದರೂ ಅನೇಕ ವಿಧವಾದ ಕಾರ್ಯಗಳನ್ನು ಮಾಡಲು ಶಕ್ತಿಯುಳ್ಳದ್ದಾಗಿರುವುದು. ಅದು ಉಸಿರಾಡಬಲ್ಲದು, ಸ್ತನ್ಯಪಾನಮಾಡಬಲ್ಲದು, ಸೀನಬಲ್ಲದು, ಕೆಮ್ಮಬಲ್ಲದು. ಏನಾದರೂ ಸ್ವಲ್ಪ ನೋವುಂಟಾದರೆ ಅಳುವುದಕ್ಕೆ ಪ್ರಾರಂಭಿಸುವುದು. ದೊಡ್ಡ ಶಬ್ದವಾದಾಗ ಬೆಚ್ಚಿಬೀಳುವುದು. ಬೋರಲಾಗಿ ಮಲಗಿಸಿರುವಾಗ ತಲೆಯನ್ನು ಈ ಕಡೆ ಆ ಕಡೆ ತಿರುಗಿಸಬಲ್ಲದು; ಶ್ವಾಸಬಿಡುವುದಕ್ಕೆ ಅನುಕೂಲಿ

---

ಇದನ್ನು ಅಮೆರಿಕಾದೇಶದ ಮನಶ್ಶಾಸ್ತ್ರಜ್ಞನಾದ ಗೆಸ್ಸೆಲ್ ಎಂಬವನು ವಿಸ್ತಾರವಾಗಿ ವಿವರಿಸಿರುವನು.

ಸುವಂತೆ ತಲೆಯನ್ನು ಸ್ವಲ್ಪ ಪಕ್ಕಕ್ಕೆ ತಿರುಗಿಸಬಲ್ಲದು. ಅದರ ಕೈಗೆ ಒಂದು ಬೆತ್ತವನ್ನು ಕೊಟ್ಟರೆ ಅದನ್ನು ತನ್ನ ಬೆರಳುಗಳಿಂದ ಬಿಗಿಯಾಗಿ ಹಿಡಿದುಕೊಳ್ಳಬಲ್ಲದು. ಈ ಹಿಡಿತವು ಕೆಲವು ಮಕ್ಕಳಲ್ಲಿ ಬಹಳ ಬಲವಾಗಿರುವುದು; ಬೆತ್ತವನ್ನು ಹಿಡಿದು ಎತ್ತಿದರೆ ಮಗುವೂ ಅದರ ಜೊತೆಯಲ್ಲಿ ಏಳುವುದು.

ಇನ್ನೊಂದು ವಿಷಯ. ಮೊದಲನೆಯ ತಿಂಗಳೊಳಗಿರುವ ಮಗು ಒಂದೊಂದು ಅವಯವವನ್ನೂ ಬೇರೆಬೇರೆಯಾಗಿ ಆಡಿಸಲಾರದು. ದೇಹದ ಯಾವ ಒಂದು ಭಾಗದಲ್ಲಿ ಒಂದು ಪ್ರಚೋದನೆಯುಂಟಾದರೂ ಅದಕ್ಕೆ ಪ್ರತಿಕ್ರಿಯೆಯಾಗಿ ದೇಹವೆಲ್ಲವೂ ಚಲಿಸುವುದು. ಈ ಅವಯವಗಳನ್ನು ಬೇರೆಬೇರೆಯಾಗಿ ಆಡಿಸುವುದಕ್ಕೆ ಆವಶ್ಯಕವಾದ ನರಗಳ ಸಂಬಂಧವು ಇನ್ನೂ ಮಗುವಿನ ದೇಹದಲ್ಲಿ ಏರ್ಪಟ್ಟಿರುವುದಿಲ್ಲ. ದೊಡ್ಡವರನ್ನು ಒಂದು ಸೂಜಿಯಿಂದ ಚುಚ್ಚಿದರೆ, ಚುಚ್ಚಲ್ಪಟ್ಟ ಅವಯವ ಮಾತ್ರ ಚಲಿಸುವುದು; ಯಾವ ಅವಯವದಲ್ಲಿ ನೋವುಂಟಾಗುತ್ತದೆಯೋ ಆ ಅವಯವವನ್ನು ಮಾತ್ರ ಅವರು ಹಿಂದಕ್ಕೆ ಎಳೆದುಕೊಳ್ಳುತ್ತಾರೆ. ಆದರೆ ಒಂದು ತಿಂಗಳ ವಯಸ್ಸಿನೊಳಗಿರುವ ಶಿಶುವಾದರೋ ದೇಹವೆಲ್ಲವನ್ನೂ ಒದರುವುದು.

ಈ ವಯಸ್ಸಿನ ಮಗುವಿನ ವರ್ತನೆಯಲ್ಲಿ ಮತ್ತೊಂದು ವಿಶೇಷವೇನೆಂದರೆ ಹೊರಗಿನಿಂದ ಯಾವ ಪ್ರಚೋದನೆ ಬಾರದಿದ್ದರೂ ಮಗುವು ತನ್ನ ಕೈಕಾಲುಗಳನ್ನು ಆಡಿಸುತ್ತಲೇ ಇರುವುದು; ಈ ವರ್ತನೆಗೆ ಬಹುಶಃ ದೇಹದೊಳಗಿನಿಂದ ಬರುವ

---

ಸಣ್ಣಮಕ್ಕಳ ವರ್ತನೆಯನ್ನು ಓಹಿಯೋ ವಿಶ್ವವಿದ್ಯಾನಿಲಯದ ಮನಶ್ಶಾಸ್ತ್ರಜ್ಞರು ಬಹಳ ವಿವರವಾಗಿ ಪರೀಕ್ಷಿಸಿದ್ದಾರೆ.

(ಆಂತರಿಕ) ಪ್ರಚೋದನೆಗಳೇ ಕಾರಣವಾಗಿರಬೇಕು. ಕಣ್ಣು ಕಿವಿ ಮುಂತಾದ ಇಂದ್ರಿಯಗಳ ಮೂಲಕ ನಾವು ನಮ್ಮ ಹೊರಗೆ ನಡೆಯುವ ವಿದ್ಯಮಾನಗಳನ್ನು ತಿಳಿದುಕೊಳ್ಳುವಂತೆಯೇ ನಮ್ಮ ದೇಹದೊಳಗಿರುವ ಇಂದ್ರಿಯಗಳ ಮೂಲಕ ನಮ್ಮ ಅವಯವಗಳಲ್ಲಿ ಉಂಟಾಗುವ ನೋವು ಬಳಲಿಕೆ ಮುಂತಾದ ವಿಕಾರಗಳನ್ನು ತಿಳಿಯಬಹುದು. ಈ ಇಂದ್ರಿಯಗಳಿಗೆ ಆಂತರಿಕ ಇಂದ್ರಿಯ (ಇಂಟೀರೊ ಸೆಪ್ಟಾಸ್ರ್) ಗಳೆಂದು ಹೇಳಬಹುದು. ಇಂತಹವು ನಮ್ಮ ಮಾಂಸಖಂಡಗಳಲ್ಲಿಯೂ ಕೀಲುಗಳಲ್ಲಿಯೂ ಇರುತ್ತವೆ. ಮಾಂಸಖಂಡಗಳಲ್ಲಿ ಉಂಟಾಗಬಹುದಾದ ಬಳಲಿಕೆ ಮುಂತಾದ ವಿಕಾರಗಳನ್ನು ನಾವು ಈ ಇಂದ್ರಿಯಗಳ ಮೂಲಕ ತಿಳಿಯಬಹುದು. ಈ ಆಂತರಿಕ ಇಂದ್ರಿಯಗಳ ಮೂಲಕ ಮಗುವಿನ ವರ್ತನೆಯು ಮಾರ್ಪಡುವುದು. ಮಗುವಿಗೆ ಹಸಿವುಂಟಾದಾಗ ಅಥವಾ ಅದಕ್ಕೆ ನೋವುಂಟಾದಾಗ ಅದು ತನ್ನ ಕಾಲು ಕೈಗಳನ್ನು ಒದರಿಕೊಂಡು ಅಳಲಾರಂಭಿಸುವುದು.

ಮತ್ತೊಂದು ವಿಶೇಷ ಸಂಗತಿ. ಮಗುವು ತನಗೆ ಬೇಕಾದಷ್ಟು ಹಾಲು ಕುಡಿದಮೇಲೆ ಕುಡಿಯುವುದನ್ನು ನಿಲ್ಲಿಸುತ್ತದೆ. ಆಗ ಅದರ ತಲೆಯ ಕೂದಲನ್ನಾಗಲಿ ಅಥವಾ ಕಾಲುಬೆರಳನ್ನಾಗಲಿ ಎಳೆದರೆ ಅದು ಪುನಃ ಹಾಲು ಕುಡಿಯುವಂತೆ ಬಾಯನ್ನು ಆಡಿಸುವುದು. ಹೀಗೆ ಶಿಶುವು ಯಾವ ಕೆಲಸವನ್ನು ಮಾಡುತ್ತಿರುವುದೋ ಆ ಕೆಲಸವನ್ನು ನಿಲ್ಲಿಸಿದಾಗ ದೇಹದ ಬೇರೆ ಯಾವ ಭಾಗಗಳಲ್ಲಿ ಪ್ರಚೋದನೆಯುಂಟಾದರೂ ಅದು ತಾನು ಮಾಡಿ ನಿಲ್ಲಿಸಿದ ಕಾರ್ಯವನ್ನು ಪುನಃ ಆರಂಭಿಸುವುದು. ಮಗುವು ಸಂತೋಷವಾಗಿ ಆಡಿಕೊಳ್ಳುವುದು ಅದರ ತೃಪ್ತಿಯನ್ನು

ಸೂಚಿಸುತ್ತದೆ. ಆಲಸ್ಯವಾದಾಗ, ಹಸಿವಾದಾಗ ಅಳುತ್ತದೆ; ಇದು ಆದರ ಅತೃಪ್ತಿಯ ಸೂಚನೆ.

ಮಗುವಿಗೆ ಆಲಸ್ಯವಾದಾಗ ಹಸಿವಾದಾಗ ಅಥವಾ ನೋವಾದಾಗ ಈ ವಿಷಮ ಸ್ಥಿತಿಗಳಲ್ಲಿ ಬದಲಾವಣೆಯಾಗುವವರೆಗೂ ಅದು ಪ್ರತಿಕ್ರಿಯೆಯನ್ನು ಮುಂದುವರಿಸುತ್ತಿರುವುದು. ಅಸ್ವಸ್ಥತೆ ನಿಲ್ಲುವವರೆಗೂ ಕೈಕಾಲುಗಳನ್ನು ಆಡಿಸಿ ಅಳುತ್ತಿರುವುದು; ಕೈಕಾಲುಗಳನ್ನು ಒದರುವುದು. ತಾನು ಅಸ್ವಸ್ಥತೆಯಲ್ಲಿದ್ದಾಗ ಹಿಂದೆ ತನಗೆ ತೃಪ್ತಿಯನ್ನುಂಟುಮಾಡಿದ ಸಾಮಗ್ರಿಗಳಲ್ಲಿ ಯಾವುದನ್ನು ಮತ್ತೆ ಕಂಡರೂ ಪುನಃ ತೃಪ್ತಿಯನ್ನು ತೋರಿಸುವುದು. ಹೊಟ್ಟೆನೋವಿನಿಂದಲೋ ಅಥವಾ ಹಾಸಿಗೆ ಬಟ್ಟೆ ಒಳಲೆ ಇವುಗಳ ಚುಚ್ಚುವಿಕೆಯಿಂದಲೋ ತನಗೆ ಅಸ್ವಸ್ಥತೆಯುಂಟಾಗುವ ವೇಳೆಯಲ್ಲಿ ತನ್ನ ತಾಯಿ ಬಂದು ಅಸ್ವಸ್ಥತೆಯನ್ನು ನಿವಾರಣೆಮಾಡಿದರೆ ಶಿಶುವಿಗೆ ತೃಪ್ತಿಯುಂಟಾಗುವುದು. ತನಗೆ ಯಾವ ತರದ ಅಸ್ವಸ್ಥತೆಯಿಲ್ಲದಿದ್ದರೂ ತಾಯಿಯ ಮುಖವನ್ನೋ ಧ್ವನಿಯನ್ನೋ ಗುರುತಿಸಿದ ಕೂಡಲೇ ತೃಪ್ತಿಯನ್ನು ತೋರಿಸುವುದು. ಇದು ಶಿಶುವಿಗೆ ತಾಯಿಯಲ್ಲಿರುವ ಪ್ರೇಮ ಸೂಚನೆ. ಪ್ರಾರಂಭದಲ್ಲಿ ಅಸ್ವಸ್ಥತೆಯ ನಿವಾರಣೆ ತೃಪ್ತಿಗೆ ಕಾರಣವಾದರೂ ಕಾಲಕ್ರಮದಲ್ಲಿ ಈ ಅಸ್ವಸ್ಥತೆಯನ್ನು ನಿವಾರಣೆಮಾಡುವ ಸನ್ನಿವೇಶಗಳೆಲ್ಲವೂ ತೃಪ್ತಿಗೆ ಕಾರಣವಾಗುವುವು.

ತೃಪ್ತಿ ಅತೃಪ್ತಿಗಳನ್ನಲ್ಲದೆ, ಹುಟ್ಟಿದ ಮಗುವು ಭಯ, ಕೋಪ ಮತ್ತು ಪ್ರೀತಿಗಳನ್ನು ತೋರಿಸುತ್ತದೆ ಎಂದು ಅಮೆರಿಕದ ಸುಪ್ರಸಿದ್ಧ ಮನಶ್ಶಾಸ್ತ್ರಜ್ಞನಾದ ವಾಟ್ಸನ್ ಎಂಬುವನು ಅಭಿ

ಪ್ರಾಯಪಡುತ್ತಾನೆ. ಆದರೆ ಈಗ ಸುಮಾರು ಹತ್ತು ಹದಿನೈದು ವರ್ಷಗಳಿಂದೀಚೆಗೆ ಈ ವಿಷಯದಲ್ಲಿ ನಡೆದಿರುವ ಸಂಶೋಧನೆಗಳಿಂದ ವಾಟ್ಸನ್ನನ ಅಭಿಪ್ರಾಯಕ್ಕೆ ಬೆಂಬಲ ದೊರೆತಿಲ್ಲ. ಈ ಸಂಶೋಧನೆಗಳ ಪ್ರಕಾರ ಹುಟ್ಟಿದ ಶಿಶುವಿನಲ್ಲಿ ತೃಪ್ತಿ ಮತ್ತು ಅಸ್ವಸ್ಥತೆ ಹೊರತು ಇನ್ನು ಯಾವ ಭಾವೋದ್ರೇಕಗಳೂ ಸ್ಪಷ್ಟವಾಗಿ ಕಂಡುಬರುವುದಿಲ್ಲ. ಶಿಶುವಿನಲ್ಲಿ ಬೇರೆ ಯಾವ ಭಾವೋದ್ರೇಕಗಳು ಉಂಟಾದರೂ ಅದು ಇಂಥಾ ಭಾವೋದ್ರೇಕವೆಂದು ಹೇಳಲು ಸಾಧ್ಯವಿಲ್ಲ. ದೊಡ್ಡವರಲ್ಲಿ ಬೇರೆ ಬೇರೆ ಭಾವಗಳಿಗೆ ಅನುಗುಣವಾದ ಬೇರೆ ಬೇರೆ ಅನುಭಾವಗಳು ಕಂಡುಬರುವಂತೆ ಈ ಸಣ್ಣ ಮಕ್ಕಳಲ್ಲಿ ನಿರ್ದಿಷ್ಟವಾದ ಅನುಭಾವಗಳು ಕಂಡುಬರುವುದಿಲ್ಲ. ಉದಾಹರಣೆಗೆ: ಮಗು ಅತ್ತರೆ ಆದರ ಧ್ವನಿಯನ್ನು ಕೇಳಿ ಅದು ಹಸಿವಿನಿಂದ ಹುಟ್ಟಿದ ಅಳುವೋ ನೋವಿನಿಂದ ಹುಟ್ಟಿದ ಅಳುವೋ ಅಥವಾ ಭಯದಿಂದ ಉಂಟಾದ ಅಳುವೋ ಎಂಬುದನ್ನು ಊಹಿಸಲಾಗುವುದಿಲ್ಲ. ಷರ್ಮ್ಯಾ ಎಂಬ ಶಾಸ್ತ್ರಜ್ಞನು ಒಂದು ತಿಂಗಳೊಳಗಿನ ಮಕ್ಕಳಮೇಲೆ ಬೇರೆ ಬೇರೆ ಭಾವಗಳನ್ನು ಹುಟ್ಟಿಸುವಂಥಾ ಪ್ರಚೋದನೆಗಳನ್ನು ಪ್ರಯೋಗಮಾಡಿದನು. ಆಗ ಮಕ್ಕಳು ತೋರ್ಪಡಿಸಿದ ಅನುಭವಗಳ ಚಲನಚಿತ್ರವನ್ನು ತೆಗೆದು ಅವನ್ನು ಮಕ್ಕಳ ವರ್ತನೆಯ ಪರಿಶೀಲನದಲ್ಲಿ ಪ್ರವೀಣರಾದ ಕೆಲವು ಮನಶ್ಶಾಸ್ತ್ರಜ್ಞರಿಗೂ ವೈದ್ಯರಿಗೂ ಮತ್ತು ದಾದಿಯರಿಗೂ ತೋರಿಸಿ ಯಾವ ಯಾವ ಚಲನವಲನಗಳು ಯಾವ ಭಾವಗಳನ್ನು ಸೂಚಿಸುತ್ತವೆಯೆಂದು ಕೇಳಿದನು. ಒಬ್ಬೊಬ್ಬರು ಒಂದೊಂದು ವಿಧವಾದ ಉತ್ತರವನ್ನು ಕೊಟ್ಟರು. ಯಾವ ಚರ್ಯೆಯು ಯಾವ ಭಾವವನ್ನು ಸೂಚಿಸುತ್ತದೆ ಎಂಬ

ದನ್ನು ಹೇಳಲಾಗುವುದಿಲ್ಲವೆಂದು ಈ ಪ್ರಯೋಗದಿಂದ ಸ್ಥಿರ ಪಟ್ಟಿತು. ಆದರೆ ಮಗುವಿಗೆ ನಾಲ್ಕಾರು ತಿಂಗಳು ಆದಮೇಲೆ ಅದರ ಧ್ವನಿ ಮತ್ತು ಅದರ ವರ್ತನದಿಂದ ಅದರಲ್ಲಿ ಉದ್ರೇಕ ವಾದ ಭಾವವನ್ನು ಕಂಡುಹಿಡಿಯಲು ಸಾಧ್ಯವಾಗಿದೆ. ಅದರ ಮುಖಚರ್ಯೆಯಿಂದಲೂ ದೇಹದ ಇತರ ಭಾಗಗಳ ಚಲನ ವಲನಗಳಿಂದಲೂ ಮಗುವು ಯಾವ ಭಾವವನ್ನು ತೋರ್ಪಡಿ ಸುವುದು ಎಂಬುದನ್ನು ಹೇಳಬಹುದು.

---

# ೩. ಮಕ್ಕಳ ಹೆದರಿಕೆ*

ಐದಾರುವರ್ಷದ ಮಕ್ಕಳನ್ನು ಗಮನಿಸಿ ನೋಡಿದರೆ ಅವರಲ್ಲಿ ಎಷ್ಟೋ ವಿಧವಾದ ಭಯಗಳು ಕಾಣಬರುವುವು. ರಾತ್ರಿ ಕತ್ತ ಲಲ್ಲಿರುವ ಸಾಮಾನನ್ನೇನಾದರೂ ತೆಗೆದುಕೊಂಡು ಬರಬೇಕಾ ದರೆ ಮಗುವು "ನನಗೆ ಹೆದರಿಕೆ; ನಾನು ಹೋಗುವುದಿಲ್ಲ" ಎಂದು ಹೇಳುವುದು. ಮೃಗಾಲಯದಲ್ಲಿ ಮೃಗಗಳನ್ನಿಟ್ಟಿರುವ ಬೋನುಗಳ ಹತ್ತಿರ ಹೋಗಲು ಮಕ್ಕಳು ಹೆದರುವರು. ಭಿಕ್ಷು

---

*ಈ ಅಧ್ಯಾಯವನ್ನು "ಮಕ್ಕಳ ಪುಸ್ತಕ"ದ 1939ನೆಯ ನವಂಬರ್ ಸಂಚಿಕೆಯಲ್ಲಿ ಬಂದಿರುವ ಈ ಗ್ರಂಥಕರ್ತರ ಲೇಖನದಿಂದ ಉದ್ಧರಿಸಿದೆ.

ಕನು ಮನೆಯಮುಂದೆ ಬಂದರೆ ಮಕ್ಕಳು ಹೆದರಿ "ಅಮ್ಮಾ, ಗೊಗ್ಗಯ್ಯ" ಎನ್ನುತ್ತಾ ಒಳಗೆ ಓಡಿಬರುವುವು; ನಾಯಿ ಬೆಕ್ಕುಗಳನ್ನು ನೋಡಿದರೂ ಹೆದರಿ ಹಿಂದಿರುಗುವರು.

ಆದರೆ ಒಂದು ಅಥವಾ ಎರಡು ವರ್ಷದ ಮಕ್ಕಳಿಗೆ ಕತ್ತಲೆಯ ಭಯವಿಲ್ಲ; ಕತ್ತಲೆಯಲ್ಲಿ ನಿರ್ಭಯವಾಗಿ ಒಬ್ಬೊಬ್ಬರೇ ತಿರುಗುವರು. ಮನೆಗೆ ಯಾರು ಬಂದರೂ ಹೆದರಿಕೆ ಇಲ್ಲದೆ ಅವರ ಜತೆಯಲ್ಲಿ ಮಾತನಾಡುವರು. ದಾರಿಯಲ್ಲಿ ನಾಯಿಯನ್ನು ನೋಡಿದಾಗ ಅದರ ಹತ್ತಿರಕ್ಕೆ ಹೋಗಿ ಅದರೊಡನೆ ಆಟವಾಡಲು ಹೋಗುವರು. ಮೃಗಾಲಯಕ್ಕೆ ಕರೆದುಕೊಂಡುಹೋದಾಗ ಕುತೂಹಲದಿಂದ ಚಪ್ಪಾಳೆ ಹೊಡೆಯುತ್ತ ಮೃಗದ ಹತ್ತಿರಕ್ಕೆ ಓಡಿಹೋಗುವರು. ಈ ವಯಸ್ಸಿನಲ್ಲಿ ಮಕ್ಕಳಿಗೆ ಹೆದರಿಕೆ ಇಲ್ಲ. ಅದೇ ಮಕ್ಕಳು ಸ್ವಲ್ಪ ಬೆಳೆದಮೇಲೆ ಅದೇ ಸನ್ನಿವೇಶಗಳಲ್ಲಿ ಭಯವನ್ನು ತೋರಿಸುವರು. ಈ ರೀತಿಯ ಭಯ ಮಕ್ಕಳಲ್ಲಿ ಹೇಗೆ ಹುಟ್ಟುತ್ತದೆ ಎಂಬುದು ಮುಂದಿನ ಪ್ರಶ್ನೆ.

ಈ ವಿಚಾರದಲ್ಲಿ ಮನಶ್ಶಾಸ್ತ್ರಜ್ಞರು ಪರಿಶೋಧನೆಗಳನ್ನು ನಡೆಸಿರುವರು. ಅವರು ನಡೆಸಿರುವ ಒಂದು ಪ್ರಯೋಗವನ್ನು ಇಲ್ಲಿ ವಿವರಿಸಬಹುದು. ಮೇರಿ ಕವರ್ ಜೋನ್ಸ್ (Mary Cover Jones) ಎಂಬಾಕೆ ಸಾಧುವಾದ ಆದರೆ ಬಹು ಚುರುಕಾದ, ವಿಷವಿಲ್ಲದ ದೊಡ್ಡ ಹಾವನ್ನು ಹಿಡಿದುಕೊಂಡು ಅದನ್ನು ಒಂದೆರಡು ವರ್ಷ ವಯಸ್ಸಿನ ಮಕ್ಕಳ ಮುಂದೆಯೂ ಮೂರು ನಾಲ್ಕು ವರ್ಷಗಳ ಮಕ್ಕಳ ಮುಂದೆಯೂ ದೊಡ್ಡವರ ಮುಂದೆಯೂ ಬಿಟ್ಟು ಅವರ ವರ್ತನೆಯನ್ನು ಪರೀಕ್ಷಿಸಿದಳು. ಒಂದು ಎರಡು ವರ್ಷದ ಸಣ್ಣ ಮಕ್ಕಳು ಸ್ವಲ್ಪವಾದರೂ ಹೆದರಿಕೆಯಿಲ್ಲದೆ

ಅದರ ಹತ್ತಿರಹೋಗಿ ಅದನ್ನು ಹಿಡಿದು ಆಡುವುದಕ್ಕಾರಂಭಿಸಿದರು. ಆದರೆ ೩-೪ ವರ್ಷದ ಮಕ್ಕಳು ಅದನ್ನು ಹಿಡಿಯಲು ಅಥವಾ ಅದರ ಹತ್ತಿರ ಹೋಗಲು ಪ್ರಯತ್ನಿಸಲಿಲ್ಲ; ಹಾವನ್ನು ಮಾತ್ರ ಅತಿ ಕುತೂಹಲದಿಂದ ನೋಡುತ್ತಿದ್ದರು. ಐದು ವರ್ಷದ ಮಕ್ಕಳು ದೊಡ್ಡವರಂತೆ ಆ ಹಾವನ್ನು ದೂರದಿಂದ ನೋಡಿದಕೂಡಲೆ ಹೆದರಿ ಅಲ್ಲಿಂದ ಓಡಿಹೋದರು.

ವಾಟ್ಸನ್ ಎಂಬ ಅಮೆರಿಕಾದ ಮತ್ತೊಬ್ಬ ಶಾಸ್ತ್ರಜ್ಞನು ಒಂದು ದೊಡ್ಡ ಹೆರಿಗೆ ಆಸ್ಪತ್ರೆಯಲ್ಲಿ ಆಗತಾನೆ ಹುಟ್ಟಿದ ಮಕ್ಕಳ ಭಾವಗಳನ್ನು ಪರಿಶೀಲಿಸಿದನು. ಒಂದು ತಿಂಗಳ ವಯಸ್ಸಿನ ಮಕ್ಕಳಲ್ಲಿ ಯಾವಾಗಲೋ ಒಂದೊಂದು ಸಲ ಭಯದ ಚಿಹ್ನೆಗಳು ಕಾಣಿಸಿಕೊಂಡುವು. ಎರಡನೆಯ ಮತ್ತು ಮೂರನೆಯ ತಿಂಗಳಿನಲ್ಲಿ ಮಕ್ಕಳು ದೊಡ್ಡ ಶಬ್ದವಾದಾಗ, ಪವನತಪ್ಪಿದಾಗ ಅಥವಾ ನೋವುಂಟಾದಾಗ ಭಯದ ಸೂಚನೆಯನ್ನು ತೋರಿಸಿದುವು. ಮೊದಲನೆಯ ವರ್ಷದಲ್ಲಿ ಹೆದರಿಕೆ ಹುಟ್ಟಬೇಕಾದರೆ ಇವುಗಳಲ್ಲಿ ಯಾವುದಾದರೂ ಒಂದು ಕಾರಣವಿರಬೇಕೆಂತಲೂ ಬೇರೆ ಯಾವ ಕಾರಣದಿಂದಲೂ ಹೆದರಿಕೆಯುಂಟಾಗುವುದಿಲ್ಲವೆಂತಲೂ ಇದರಿಂದ ಸೂಚಿತವಾಯಿತು. ಬೆಳೆದ ಮಕ್ಕಳಲ್ಲಿ ಇತರ ಕಾರಣಗಳಿಂದ ಹೆದರಿಕೆಗಳು ಹೇಗೆ ಹುಟ್ಟುತ್ತವೆ ಎಂಬುದು ಮುಂದಿನ ಪ್ರಶ್ನೆ.

ಹೆದರಿಕೆಗಳೆಲ್ಲವೂ ಸ್ವಾಭಾವಿಕವಾದುವಲ್ಲ. ಕೆಲವುಮಾತ್ರ ಸ್ವಾಭಾವಿಕವಾದುವು; ಸಂಸರ್ಗಜನ್ಯವಾದುವೇ ಹೆಚ್ಚು. ಸಿಡಿಲಿನಂಥಾ ಶಬ್ದ ಅಥವಾ ಗದರಿಸುವ ಶಬ್ದ ಕೇಳಿದಾಗ ಬೆಚ್ಚಿಬೀಳುವುದೂ ಸುಡುವ ಪದಾರ್ಥವನ್ನು ಮುಟ್ಟಿದಾಗ ಹೆದರಿ

ನ್ನು ಒಂದಕ್ಕೆ ತೆಗೆದುಕೊಳ್ಳುವುದೂ ಏಟುಕೊಟ್ಟಾಗ ವುದೂ ಸ್ವಾಭಾವಿಕವಾದ ಹೆದರಿಕೆಗಳಿಗೆ ಉದಾಹರಣೆಗಳು. ಸ್ವಾಭಾವಿಕಪ್ರಚೋದನಗಳಿಂದಲ್ಲದೆ ಅವುಗಳ ಸಂಸರ್ಗದಲ್ಲಿ ಅಪ್ರಕೃತವಾದ ಇತರ ಪ್ರಚೋದನೆಗಳಿಂದಲೂ ಹೆದರಿಕೆ ಹುಟ್ಟಬಹುದು. ಹೇಗೆಂದರೆ—ಒಂದು ಸಣ್ಣ ಮಗು ು ನಾಯಿಯಜೊತೆಯಲ್ಲೋ ಬೆಕ್ಕಿನ ಜೊತೆಯಲ್ಲೋ ತ್ತಿರುತ್ತದೆ. ಆಡುವಾಗ ಮಗು ಅದರ ಬಾಲವನ್ನೋ ುನ್ನೋ ಎಳೆಯುತ್ತದೆ. ಆಗ ನಾಯಿ ಬೊಗಳುವುದು, ಪರಚುವುದು. ಆಕಸ್ಮಿಕವಾದ ಈ ಬೊಗಳುವಿಕೆಯು ಾ ಪರಚುವಿಕೆಯು ಮಗುವಿಗೆ ಹೆದರಿಕೆಯನ್ನುಂಟುಮಾಡು . ಈ ಹೆದರಿಕೆಯು ಆ ಶಬ್ದದಿಂದ ಅಥವಾ ಪರಚುವಿಕೆ ುಂಟಾದುದಾದರೂ ಮಗುವು ಮುಟ್ಟಿದ್ದು ನಾಯಿಯ ಾ ಬೆಕ್ಕಿನ ಕೂದಲನ್ನು. ಇನ್ನು ಮುಂದೆ ಆ ನಾಯಿ ಾ ಬೆಕ್ಕನ್ನು ನೋಡಿದ ಮಾತ್ರದಿಂದಲೇ ಅದಕ್ಕೆ ಹೆದರಿಕೆ ಂಟಾಗುವುದು. ಇಷ್ಟು ದಿವಸವೂ ನಾಯಿಯನ್ನು ನೋಡಿ ದಿದ್ದ ಮಗು ಇನ್ನುಮೇಲೆ ಆ ನಾಯಿಯನ್ನಾಗಲೀ ಅದರ ುಂತೆ ಕೂದಲುಳ್ಳ ಪದಾರ್ಥವನ್ನಾಗಲೀ ನೋಡಿದ ಮಾತ್ರ ಲೇ ಹೆದರುವುದು.

ಈ ರೀತಿಯ ತತ್ತ್ವಗಳನ್ನು ವಾಟ್ಸನ್ ತನ್ನ ಪ್ರಯೋಗಗ ಕಂಡುಹಿಡಿದಿದ್ದಾನೆ. ಹದಿನೈದು ತಿಂಗಳಿನ ಒಂದು ುವಿನ ಹತ್ತಿರ ವಾಟ್ಸನ್ ಒಂದು ಬಿಳಿಯ ಇಲಿಯನ್ನು ನು. ಅದರ ಜೊತೆಯಲ್ಲಿ ಮಗುವು ಆಡಿಕೊಂಡಿತ್ತು. ೇಲೆ ಒಂದು ಮೊಲ, ಒಂದು ನಾಯಿ, ಒಂದು ಕರಡಿ ಂಬೆ ಮುಂತಾದ ಕೂದಲಿರುವ ಪ್ರಾಣಿಗಳನ್ನೂ ಮತ್ತು

ಬೊಂಬೆಗಳನ್ನೂ ಅದಕ್ಕೆ ತೋರಿಸಿದನು. ಒಂದೊಂದರ ಜೊತೆಯಲ್ಲೂ ಮಗುವು ಆಡುತ್ತಿತ್ತು. ಮೊಲದ ಜೊತೆಯಲ್ಲಿ ಆಡುತ್ತಿದ್ದಾಗ ಒಂದು ತಗಡಿನ ಪೆಟ್ಟಿಗೆಯನ್ನು ಹೊಡೆದು ಅಸಾಧ್ಯವಾದ ಗದ್ದಲವನ್ನುಂಟುಮಾಡಿದನು. ಮಗು ಈ ಶಬ್ದ ವನ್ನು ಕೇಳಿ ಹೆದರಿ ಮೊಲವನ್ನು ಬಿಟ್ಟು ತಾಯಿಯ ಹತ್ತಿರ ಓಡಿಹೋಯಿತು. ಇನ್ನೊಂದು ಸಲವೂ ಮಗುವು ಮೊಲದ ಜೊತೆಯಲ್ಲಿ ಆಡುತ್ತಿದ್ದಾಗ ಅದೇ ರೀತಿಯಾಗಿ ಬೊಬ್ಬೆ ಎಬ್ಬಿಸಿ ದನು. ಈ ರೀತಿ ಎರಡು ಮೂರು ಸಲ ಮಾಡಿದ ಮೇಲೆ ಮೊಲವನ್ನು ನೋಡಿದರೆ ಆ ಮಗುವಿಗೆ ಹೆದರಿಕೆ ಹುಟ್ಟುವಂ ತಾಯಿತು. ಈ ಹೆದರಿಕೆಯು ಮೊಲವೊಂದೇ ಅಲ್ಲದೆ ಇತರ ಕೂದಲಿರುವ ಪ್ರಾಣಿಗಳಲ್ಲೂ ಗೊಂಬೆಗಳಲ್ಲೂ ಆರೋಪಿತ ವಾಯಿತು.

ಹೀಗೆ ಬೆಕ್ಕು ಅಥವಾ ನಾಯಿಯಿಂದ ಪರಚಿಸಿಕೊಂಡ ಮಗು ಆ ಮೃಗಗಳಲ್ಲದೆ ಅವನ್ನು ಹೋಲುವ ಕಂಬಳಿಯನ್ನೋ ರಗ್ಗನ್ನೋ ನೋಡಿ ಹೆದರಿದರೆ ಅಂಥಾ ಹೆದರಿಕೆ ಸಂಸರ್ಗಜನ್ಯ ವಾದ ಹೆದರಿಕೆ ಅಥವಾ ಆರೋಪಿತವಾದ ಹೆದರಿಕೆ. ಕಂಬಳಿ ಅಥವಾ ರಗ್ಗು ಅಪಾಯಕರವಾದುದಲ್ಲ. ಆದರೆ ಅದು ಬೆಕ್ಕಿನ ಅಥವಾ ನಾಯಿಯ ಕೂದಲನ್ನು ಹೋಲುವುದರಿಂದ, ಹೆದರಿಕೆ ಬೆಕ್ಕು ನಾಯಿಗಳಿಂದ ಕಂಬಳಿಗೆ, ರಗ್ಗಿಗೆ ವರ್ಗಾಯಿಸಲ್ಪಟ್ಟಿದೆ. ಕತ್ತಲೆಯಲ್ಲಿ ಹೋಗಿ ಗೋಡೆಗೆ ತಲೆಯನ್ನು ತಾಕಿಸಿಕೊಂಡು ಅಥವಾ ಮೆಟ್ಟಲಿನಿಂದ ಬಿದ್ದು ಭಯಪಟ್ಟ ಮಗುವಿನಲ್ಲಿ, ತಲೆ ತಾಕಿದುದರಿಂದ ಅಥವಾ ಬಿದ್ದದ್ದರಿಂದ ಉಂಟಾದ ಭಯವು ಕತ್ತಲೆಗೆ ಆರೋಪಿತವಾಗುವುದು. ಕಂಬಳಿಯನ್ನು ನೋಡಿ ಹೆದರುವುದು, ಕತ್ತಲೆಯನ್ನು ಕಂಡು ಹೆದರುವುದು. ಇವು

ಆರೋಪಿತವಾದ ಹೆದರಿಕೆಗಳು. ಇವಕ್ಕೆ ಇಂಗ್ಲೀಷಿನಲ್ಲಿ "ಕಂಡಿಷನ್ಡ್ ಫಿಯರ್ಸ್" ಎಂದು ಹೆಸರು. †

ಇನ್ನೊಂದು ಉದಾಹರಣೆ—ಮಗುವಿನ ಕೈಬೆರಳನ್ನು ಸೂಜಿಯಿಂದ ಚುಚ್ಚಿದರೆ ಅದು ಹೆದರಿ ಬೆರಳನ್ನು ಹಿಂದಕ್ಕೆ ಎಳೆದುಕೊಳ್ಳುವುದು ಸ್ವಾಭಾವಿಕವಾದ ಹೆದರಿಕೆ. ಈ ಹೆದರಿಕೆಯನ್ನು ಬೇರೊಂದು ಪ್ರಚೋದನೆಯಲ್ಲಿ ಆರೋಪಿಸಬಹುದು. ಬೆರಳನ್ನು ಸೂಜಿಯಿಂದ ಚುಚ್ಚುವುದು, ಅದೇ ಕಾಲದಲ್ಲೇ ಬೈಸಿಕಲ್ ಗಂಟೆಯನ್ನು ಬಾರಿಸುವುದು ; ಹೀಗೆ ನಾಲ್ಕಾರು ಸಲ ಮಾಡಿದ ಮೇಲೆ ಗಂಟೆಯನ್ನು ಬಾರಿಸುತ್ತಲೇ ಮಗುವು ಬೆರಳು ಹಿಂದಕ್ಕೆ ಎಳೆದುಕೊಳ್ಳುವಂತೆ ಮಾಡಬಹುದು.

ಕರ್ಕಶವಾದ ಶಬ್ದ, ನೋವು—ಇವು ಮೊದಮೊದಲು ಮಕ್ಕಳ ಸ್ವಾಭಾವಿಕವಾದ ಹೆದರಿಕೆಗಳಿಗೆ ಕಾರಣವಾದುವು. ಆದರೆ ಇಂಥಹದರಿಂದಲೇ ನೋವಾಯಿತು ಎಂಬ ವಿವೇಚನೆ ಸಾಮಾನ್ಯವಾಗಿ ಎಳೆಯ ಮಕ್ಕಳಿಗೆ ಇರುವುದಿಲ್ಲ. ಸ್ವಾಭಾವಿಕವಾದ ಪ್ರಚೋದನೆಯಲ್ಲವೆ ಅದರ ಸಹಚಾರಿಯಾದ ಇತರ

---

† ಹೆದರಿಕೆಗಳಲ್ಲದೆ ಇತರ ವರ್ತನೆಗಳೂ ಹೀಗೆಯೇ ಆರೋಪಿತವಾದುವಾಗಬಹುದು. ಕಣ್ಣನ್ನು ತಿವಿಯುವುದಕ್ಕೆ ಬಂದಾಗ ಕಣ್ಣುರೆಪ್ಪೆಗಳನ್ನು ಮುಚ್ಚುವುದು ಸ್ವಾಭಾವಿಕವಾದ ಪ್ರತಿಕ್ರಿಯೆ. ಆದರೆ ಹತ್ತು ಸಲ ಕಣ್ಣನ್ನು ತಿವಿಯುವಂತೆ ಮಾಡಿ ಅದೇ ಕಾಲದಲ್ಲಿ ಗಟ್ಟಿಯಾಗಿ ಶಬ್ದವನ್ನು ಮಾಡಿದರೆ, ಹನ್ನೊಂದನೆಯ ಸಲ ಕಣ್ಣು ತಿವಿಯುವುದರ ಬದಲಾಗಿ ಬರಿಯ ಶಬ್ದವನ್ನು ಮಾಡುವುದರಿಂದಲೇ ಕಣ್ಣುರೆಪ್ಪೆಗಳನ್ನು ಮುಚ್ಚುವಂತೆ ಮಾಡಬಹುದು. ಇಂಗ್ಲೀಷಿನಲ್ಲಿ ಇದಕ್ಕೆ "ಕಂಡಿಷನ್ಡ್ ರಿಫ್ಲೆಕ್ಸ್" ಎಂದು ಹೆಸರು. ಅದನ್ನು ನಾವು ಆರೋಪಿತಪ್ರತಿಕ್ರಿಯೆ ಎಂದು ಕರೆಯಬಹುದು.

ಅಂಶಗಳೂ ಭಯೋತ್ಪಾದಕಗಳಾಗುವುವು. ಈ ವಿಶಾಲವಾದ ಪ್ರಪಂಚದಲ್ಲಿ ಇಂಥಾ ಸಹಚಾರಿಗಳಾದ ಅಂಶಗಳು ಸಾವಿರ ಗಟ್ಟಲೆ ಇರುವುದರಿಂದ, ನಮ್ಮ ಆರೋಪಿತವಾದ ಹೆದರಿಕೆಗಳೂ ಅಸಂಖ್ಯಾತವಾಗಿ ಬೆಳೆಯುವುವು.

ಎರಡು ಮೂರು ವರ್ಷಗಳ ಮಕ್ಕಳು ತಮ್ಮ ಸುತ್ತಲಿರುವ ಪದಾರ್ಥಗಳನ್ನೋ ಸನ್ನಿವೇಶಗಳನ್ನೋ ಕಂಡು ಹೆದರುವುವು. ಅಂದರೆ ಅವರ ಅನುಭವದ ಸೀಮೆಯಲ್ಲಿ ಯಾವ ಸಂದರ್ಭಗಳು ಅವರಿಗೆ ಹೆದರಿಕೆಯನ್ನುಂಟುಮಾಡಿದವೋ ಅವು ತಿರುಗಿ ಸಂಭವಿಸಿದ ಕಾಲದಲ್ಲಿ ಅವು ಅಂಜುವುವು. ಮತ್ತು ಈ ಹೆದರಿಕೆಗಳು ಸಣ್ಣತನದಲ್ಲಿ ಸಂಭವಿಸಿದ್ದರಿಂದ ಜೀವವಿರುವವರೆಗೂ ಉಳಿಯುವುವು. ಆದುದರಿಂದಲೇ ನಾವು ಮಕ್ಕಳನ್ನು ಬಹಳ ಜಾಗರೂಕತೆಯಿಂದ ನೋಡಿಕೊಳ್ಳಬೇಕು.

ಯಾವ ಯಾವ ಸಂದರ್ಭಗಳಲ್ಲಿ ಬೇರೆ ಬೇರೆ ವಯಸ್ಸಿನ ಮಕ್ಕಳಲ್ಲಿ ಹೆದರಿಕೆ ಕಾಣಿಸಿಕೊಳ್ಳುವುದು ಎಂಬುದನ್ನು ನಿರ್ಧರಿಸಲು ಮನಶ್ಶಾಸ್ತ್ರಜ್ಞರು ಪರೀಕ್ಷೆಗಳನ್ನು ನಡೆಸಿರುವರು. ಇವುಗಳ ಪರಿಣಾಮವಾಗಿ ಈ ಕೆಳಗೆ ಹೇಳಿರುವ ಅಂಶಗಳು ಹೊರಬಿದ್ದಿವೆ.

ಬೀಳುವುದು, ದೊಡ್ಡ ಶಬ್ದಗಳು, ಮೃಗಗಳು, ಹಾನಿಯನ್ನುಂಟುಮಾಡುವ ಮನುಷ್ಯರು ಮತ್ತು ಸಾಮಾನುಗಳು, ಹೊಸ ಮನುಷ್ಯರು ಮತ್ತು ಹೊಸ ಸ್ಥಳಗಳು, ಪರಿಚಿತವಸ್ತುಗಳಲ್ಲಿ ಅಪರಿಚಿತ ರೂಪುಗಳನ್ನು ಕಾಣುವುದು—ಇತ್ಯಾದಿಗಳಿಂದ ಮಕ್ಕಳು ಹೆದರುವರೆಂದು ನಿರ್ಣಯವಾಯಿತು. ಇವೆಲ್ಲವೂ ಮಕ್ಕಳ ವಾತಾವರಣದಲ್ಲಿ ಇರುವ ಸಂದರ್ಭಗಳೇ ಆಗಿದೆ.

ಐದು ವರ್ಷದಿಂದ ಹನ್ನೆರಡು ವರ್ಷಗಳೊಳಗಿರುವ ಬಾಲಕ ಬಾಲಕಿಯರುಗಳಲ್ಲಿ ದೆವ್ವ, ಶವಗಳ ಭೀತಿಯೇ ಮುಖ್ಯ ವಾದುದು. ಭೀತಿಗಳಲ್ಲಿ ಇವು ಶೇಕಡ ೨೨ ರಷ್ಟು ಇದೆ. ಮೃಗಗಳ ಹೆದರಿಕೆ ಇವುಗಳಿಗಿಂತ ಕಡಮೆ. ಹೊಸ ಮನುಷ್ಯರು ಹೊಸ ಸ್ಥಳಗಳು, ಕತ್ತಲು, ಒಂಟಿಯಾಗಿರುವುದು ಮುಂತಾದವು ಇನ್ನೂ ಕಡಮೆ. ಹಾನಿಯುಂಟಾಗುವುದೆಂಬ ಅಂಜಿಕೆ ಇವೆ ಲ್ಲಕ್ಕಿಂತಲೂ ಕಡಮೆ.

ದೇಹಹಾನಿಯೇ ಎಳೆಮಗುವಿನ ಹೆದರಿಕೆಗೆ ಮೊಟ್ಟ ಮೊದಲಿನ ಏಕಮಾತ್ರ ಕಾರಣವಾಗಿರುವುದು. ಆದರೆ ಮಗುವು ಬೆಳೆಯುತ್ತ ಬೆಳೆಯುತ್ತ ಇದರ ಪ್ರಾಬಲ್ಯ ಕಡಮೆಯಾಗುತ್ತ ಬಂದು ಕೊನೆಗೆ ಬೆಳೆದ ಹುಡುಗ ಹುಡುಗಿಯರಲ್ಲಿ ಇದು ಶೇಕಡ ೧೦ರಷ್ಟು ಹೆದರಿಕೆಗಳಿಗೆ ಮಾತ್ರ ಕಾರಣವಾಗುವುದು.

ಐದುವರ್ಷಗಳಾದ ಮೇಲೆ ಅವರ ಹೆದರಿಕೆಗಳಿಗೆ ಭೌತ ವಸ್ತುಗಳಿಗಿಂತಲೂ ಕಾಲ್ಪನಿಕವಸ್ತುಗಳೇ ಪ್ರಬಲವಾದ ಕಾರಣ ಗಳಾಗುತ್ತವೆ. ಹುಲಿ, ಆನೆ, ಸಿಂಹಾದಿಗಳಿಗೆ ಹೆದರದವರೂ ದೆವ್ವ ಪಿಶಾಚಿಗಳಿಗೆ ನಡುಗುವರು. ಈ ಕಾಲ್ಪನಿಕ ಹೆದರಿಕೆ ಗಳನ್ನು ತಂದೆತಾಯಿಯರೂ ಮತ್ತು ಉಪಾಧ್ಯಾಯರೂ ಬಿಡಿ ಸಲು ಪ್ರಯತ್ನಿಸಬೇಕು.

ಹೆದರಿಕೆಗಳನ್ನು ಬಿಡಿಸುವ ವಿಧಾನಕ್ಕೆ ಇಂಗ್ಲೀಷಿನಲ್ಲಿ "ಅನ್ ಕಂಡಿಷನಿಂಗ್" ಎಂದು ಹೆಸರುಕೊಟ್ಟಿರುವರು. ಇದನ್ನು ನಾವು ಭಯವಿಸರ್ಜನೆಯ ಕ್ರಮವೆಂದು ಕರೆಯಬಹುದು. ಈ ವಿಧಾನ ವನ್ನು ಅಮೆರಿಕಾದಲ್ಲಿ ಪ್ರಚಾರಕ್ಕೆ ತಂದವನು ವಾಟ್ಸನ್, ಇವನು ನಡೆಸಿದ ವಿಸರ್ಜನೆಯ ಪ್ರಯೋಗಗಳಲ್ಲಿ ಒಂದನ್ನು ಇಲ್ಲಿ ವಿವರಿಸಬಹುದು.

ಮೊಲವನ್ನು ಕಂಡರೆ ಹೆದರುತ್ತಿದ್ದ ಒಂದು ಮಗುವಿನ ಹೆದರಿಕೆಯನ್ನು ಬಿಡಿಸಲು ವಾಟ್ಸನ್ನನು ಆ ಮಗುವು ಸಮಾಧಾನವಾಗಿ ಊಟಮಾಡುತ್ತಿದ್ದ ಸಮಯವನ್ನು ನೋಡಿಕೊಂಡು ಮೆತ್ತಗೆ ಒಂದು ಮೊಲವನ್ನು ಆ ಕೋಣೆಯ ಸಮೀಪದಲ್ಲಿಟ್ಟನು. ಮಗುವು ಮೊಲವನ್ನು ನೋಡಿತು. ಸ್ವಲ್ಪ ಅಂಜಿತು. ಮತ್ತೆ ಊಟಮಾಡತೊಡಗಿತು. ಎರಡನೆಯದಿವಸ ಅದೇ ಸಮಯದಲ್ಲೇ ಮೊಲವನ್ನು ಇನ್ನುಸ್ವಲ್ಪ ಹತ್ತಿರ ತಂದಿಟ್ಟನು. ಮೂರನೆಯ ದಿನ ಇನ್ನೂ ಹತ್ತಿರ ತಂದಿಟ್ಟನು ನಾಲ್ಕನೆಯ ದಿವಸ ಮೊಲವು ಮಗುವಿನ ಹತ್ತಿರಕ್ಕೆ ಹೋದರೂ ಅದು ಹೆದರದೆ ಅದರ ಜೊತೆಯಲ್ಲಿ ಆಡಲಾರಂಭಿಸಿತು. ಹೀಗೆ ಭಯೋತ್ಪಾದಕ ವಸ್ತುವನ್ನು ಸಂತೋಷಕರವಾದ ಸನ್ನಿವೇಶದಲ್ಲಿ ಕ್ರಮಕ್ರಮವಾಗಿ ತಂದಿಡುವುದರಿಂದ ಅದರ ವಿಚಾರವಾಗಿ ಇದ್ದ ಹೆದರಿಕೆಯನ್ನು ಬಿಡಿಸಬಹುದು.

---

## ೪. ಕೋಪ ಮತ್ತು ಅಸೂಯೆ

ಸಾಧಾರಣವಾಗಿ ಮಕ್ಕಳಲ್ಲಿ ಹೆದರಿಕೆಗಿಂತಲೂ ಕೋಪ ಹೆಚ್ಚು. ಮಕ್ಕಳಚಲನವಲನಗಳಿಗೆ ಅಡಚಣೆಯುಂಟಾದರೆ, ಅಥವ ದೈಹಿಕ ಕ್ರಿಯೆಗಳಿಗೆ ತಡೆಯುಂಟಾದರೆ ಅದಕ್ಕೆ ಕೋಪ ಬರುವುದು. ಮಗುವು ಕೈಕಾಲುಗಳನ್ನು ಬಡಿಯುತ್ತ ಅಳು

ವುದೇ ಈ ಕೋಪದ ಚಿಹ್ನೆ. ಆದರೆ ಮಗು ಬೆಳೆಯುತ್ತ ಬೆಳೆಯುತ್ತ ದೈಹಿಕಕ್ರಿಯೆಗಳಿಗಲ್ಲದೆ ಅದು ಮಾಡುವ ಯಾವ ಕೆಲಸಕ್ಕೆ ತಡೆಬಂದರೂ ಅದು ಕೋಪಗೊಳ್ಳುವುದು. ಉದಾಹರಣೆಗೆ: ಯಾರಾದರೂ ತನ್ನ ಆಟದ ಸಾಮಾನುಗಳನ್ನು ತೆಗೆದುಕೊಂಡರೆ ಮಗುವಿಗೆ ತೀವ್ರವಾಗಿ ಸಿಟ್ಟುಬರುವುದು.

ಮಕ್ಕಳಿಗೆ ಯಾವ ಸನ್ನಿವೇಶಗಳಲ್ಲಿ ಕೋಪಹುಟ್ಟುವುದು ಹೆಚ್ಚು ಎಂಬುದನ್ನು ಗುಡ್‌ಇನಫ್ ಎನ್ನುವಾಕೆ ಪರೀಕ್ಷಿಸಿ ನೋಡಿ, ಮಗುವಿಗೆ ದೇಹಾಲಸ್ಯವಾದಾಗ, ಮಲಬದ್ಧತೆಯುಂಟಾದಾಗ ಕೋಪ ಹೆಚ್ಚೆಂದು ಕಂಡುಹಿಡಿದಿರುವಳು.

ಮಕ್ಕಳು ಕೋಪಗೊಳ್ಳುವ ಸನ್ನಿವೇಶಗಳಲ್ಲಿ ಶೇಕಡ ೨೫ ರಷ್ಟು ತಮ್ಮ ವ್ಯಕ್ತಿತ್ವಕ್ಕೆ ಮತ್ತು ಆತ್ಮಗೌರವಕ್ಕೆ ಕುಂದು ಬಂದ ಸಂದರ್ಭಗಳಲ್ಲಿ ಉಂಟಾದುವು. ಯಾರಾದರೂ ತಮ್ಮನ್ನು ಹೊಡೆದರೆ ಬಯ್ದರೆ ಪೀಡಿಸಿದರೆ, ಪರಿಹಾಸ್ಯಮಾಡಿದರೆ ಅಥವಾ ಅಣಕಿಸಿದರೆ ಅವರಿಗೆ ಬಹಳ ಜಾಗ್ರತೆ ಕೋಪವುಂಟಾಗುವುದು. ಇತರ ಮಕ್ಕಳನ್ನು ತಮ್ಮ ಮುಂದೆ ಊಟಕ್ಕೆ ಕರೆದೋ ಸ್ನಾನಕ್ಕೆ ಕರೆದೋ ಅಥವಾ ಇನ್ನಾವ ರೀತಿಯಲ್ಲೋ ಅವರಿಗೆ ಪ್ರಾಧಾನ್ಯಕೊಟ್ಟರೆ ಮಕ್ಕಳಿಗೆ ಕೋಪಬರುವುದು. ನಾಲ್ಕೈದುವರ್ಷದ ಮಕ್ಕಳಿಗೆ ತಮ್ಮ ಕೆಲಸಗಳನ್ನು ತಾವೇ ಸ್ವತಃ ಮಾಡಿಕೊಳ್ಳಬೇಕೆಂಬ ಉತ್ಸಾಹವಿರುವುದು. ಆಗ ದೊಡ್ಡವರು ಆ ಉತ್ಸಾಹಕ್ಕೆ ಅಡ್ಡಿಬರುವಂತೆ ನಡೆದುಕೊಂಡರೆ, ಅಂದರೆ ಅದು ಸ್ವತಃ ಸ್ನಾನಮಾಡಲು, ಬಟ್ಟೆಹಾಕಿಕೊಳ್ಳಲು ಪ್ರಯತ್ನಪಟ್ಟಾಗ ಇತರರು ಸಹಾಯಕ್ಕೆ ಹೋದರೆ, ಅದಕ್ಕೆ ಕೋಪಬರುವುದು.

ಮಕ್ಕಳಿಗೆ ಕೋಪವನ್ನುಂಟುಮಾಡುವ ಸಂದರ್ಭಗಳಲ್ಲಿ ಶೇಕಡ ೩೦ ರಷ್ಟು, ಅವರ ಊಟಉಪಚಾರಗಳಿಗೆ ಸಂಬಂಧಿಸಿದುವು. ಅವರಿಗೆ ಹಸಿವಾದಾಗ ಆಹಾರವನ್ನು ಕೊಡಲು ತಡಮಾಡಿದರೆ ಅಥವಾ ಊಟದ ಮಧ್ಯೆ ಅವರು ಕೇಳಿದ ತಿಂಡಿತೀರ್ಥಗಳನ್ನು ಕೊಡದೆ ಹೋದರೆ ಅವರಿಗೆ ಕೋಪವುಂಟಾಗುವುದು. ಮಕ್ಕಳಿಗೆ ಕೋಪವನ್ನುಂಟುಮಾಡುವ ಸಂದರ್ಭಗಳಲ್ಲಿ ಈ ಮೂರು ಕಾರಣಗಳು ಶೇಕಡ ೭೫ ರಷ್ಟು ಎಂದು ಹೇಳಬಹುದು. ಉಳಿದ ಶೇಕಡ ೨೫ ರಷ್ಟು ಕಾರಣಗಳು ವಿವಿಧ ಸಂದರ್ಭಗಳಿಗೆ ಸೇರಿದುವು.

ಇದುವರೆಗೂ ಕೋಪವನ್ನುಂಟುಮಾಡುವ ಸಂದರ್ಭಗಳನ್ನು ಪ್ರಸ್ತಾವಿಸಲಾಯಿತು. ಈಗ ಕೋಪಗೊಂಡ ಮಕ್ಕಳ ಮುಖಭಾವದಲ್ಲಿ ಮತ್ತು ಅಂಗಚೇಷ್ಟೆಗಳಲ್ಲಿ ಉಂಟಾಗುವ ಬದಲಾವಣೆಗಳನ್ನು ಪರೀಕ್ಷಿಸೋಣ. ಮೇಲೆ ಹೇಳಿದಹಾಗೆ ಒಂದೆರಡು ತಿಂಗಳ ಮಕ್ಕಳಲ್ಲಿ ಕೋಪವುಂಟಾದಾಗ ಅವುಗಳ ಮುಖ ಕೆಂಪೇರುವುದು, ಅವು ಕೈಕಾಲುಗಳನ್ನು ಒದರುವುವು. ಆದರೆ ಸುಮಾರು ಒಂದೂವರೆ ಅಥವಾ ಎರಡು ವರ್ಷದ ಮಕ್ಕಳು ಪರಚುವುದು, ಕಚ್ಚುವುದು, ಹೊಡೆಯುವುದು ನೆಲದಮೇಲೆ ಬಿದ್ದು ಹೊರಳಾಡುವುದು—ಇತ್ಯಾದಿ ವರ್ತನೆಗಳ ಮೂಲಕ ತಮ್ಮ ಕೋಪವನ್ನು ವ್ಯಕ್ತಪಡಿಸುವರು. ಸ್ವಲ್ಪ ಬೆಳೆದು ಮಾತು ಬಂದಮೇಲೆ ಬಯ್ಯುವುದರ ಮೂಲಕ ತಮ್ಮ ಕೋಪವನ್ನು ಹೊರಪಡಿಸುವರು. ಕೆಲವುವೇಳೆ ಇತರರ ಮೇಲಿರುವ ಕೋಪವನ್ನು ತಮ್ಮ ಆಟದ ಸಾಮಾನುಗಳಮೇಲೆ ತೋರಿಸುವುವು; ಇನ್ನೂ ಸ್ವಲ್ಪ ಬೆಳೆದಮೇಲೆ, ಇತರರ ಮೇಲೆ ಕೋಪಗೊಂಡಾಗ ತಮ್ಮ ಮುಖ ಮೈ ಪರಚಿಕೊಳ್ಳುವರು ಅಥವಾ

ತಮ್ಮ ಬಟ್ಟೆಯನ್ನು ಹರಿದುಕೊಳ್ಳುವರು.

ಐದಾರು ವರ್ಷದ ಮಕ್ಕಳು ತಮ್ಮ ಕೋಪವನ್ನು ಇತರ ವಿಧದಲ್ಲಿ ತೋರ್ಪಡಿಸಬಹುದು. ಮಾಡಬೇಡವೆನ್ನುವ ಕಾರ್ಯ ವನ್ನು ಮಾಡಿ ಹಿರಿಯರಿಗೆ ಅಸಮಾಧಾನವನ್ನು ಉಂಟುಮಾಡ ಬಹುದು. ಇತರ ಮಕ್ಕಳ ಮೇಲೆ ಚಾಡಿಹೇಳಬಹುದು. ಸ್ಥಳಬಿಟ್ಟು ಕವಲದೆ ಕೂತಕಡೆಯೇ ಮೌನಧಾರಣೆ ಮಾಡಬ ಹುದು; ಆಟವಾಡುತ್ತಿರುವಾಗ ಸಂಗಡಿಗರ ಮೇಲೆ ಕೋಪ ಬಂದರೆ ಅವರ ಸಂಗಬಿಟ್ಟು ಅವರ ಆಟಕ್ಕೆ ಅಡ್ಡಿತರಬಹುದು; ಆಟದಲ್ಲಿ ಅಸಹಕಾರವನ್ನು ಸೂಚಿಸಬಹುದು. ತಮ್ಮ ಕಾರ್ಯಕ್ಕೆ ಅಡ್ಡಿತಂದ ಅಡಚಣೆಗಳನ್ನು ನಿವಾರಿಸಿ ತಮ್ಮ ಕಾರ್ಯವನ್ನು ಮುಂದುವರಿಸುವುದೇ ಕೋಪದ ಕೆಲಸ.

ಮಕ್ಕಳು ಬೆಳೆಯುತ್ತ ಬೆಳೆಯುತ್ತ ತಮ್ಮ ಕೋಪವನ್ನು ನಿಗ್ರಹಿಸಲು ಯತ್ನಿಸುವರು. ಈ ನಿಗ್ರಹಕ್ಕೆ ಎರಡು ಕಾರಣ ಗಳುಂಟು. ಒಂದು ಸ್ವಪ್ರಯತ್ನ; ಇನ್ನೊಂದು ಸಾಮಾಜಿಕ ಅಡ ಚಣೆ. ನಾಲ್ಕೈದು ವರ್ಷದ ಮಕ್ಕಳು ತಾವು ಹಿಂದೆ ಕೋಪ ವನ್ನು ವ್ಯಕ್ತಗೊಳಿಸಲೋಸುಗ ಮಾಡುತ್ತಿದ್ದ ಅಂಗಚೇಷ್ಟೆ ಗಳೆಲ್ಲವೂ ನಿರರ್ಥಕವೆಂದರಿತು ಈಗ ಈ ಅಂಗಚೇಷ್ಟೆಗಳನ್ನು ನಿಗ್ರಹಿಸಿ ತಮ್ಮ ಕೋಪವನ್ನು ನಾಗರಿಕ ರೀತಿಯಲ್ಲಿ ವ್ಯಕ್ತಗೊಳಿಸಲು ಕಲಿತುಕೊಳ್ಳುವುವು. ಕೋಪವುಂಟಾದಾಗ ತಾಯಿತಂದೆಗಳು ಬುದ್ಧಿಹೇಳಿ ಕೋಪವನ್ನು ನಿಗ್ರಹಿಸಲು ಸಹಾಯ ಮಾಡುವರು. ಅನಾಗರಿಕ ರೀತಿಯಲ್ಲಿ ಕೋಪವನ್ನು ವ್ಯಕ್ತಪಡಿಸಿದರೆ ಸಮಾಜವೂ ಅದನ್ನು ಅನುಮೋದಿಸುವುದಿಲ್ಲ. ಈ ಕಾರಣಗಳಿಂದ ಹುಡುಗರು ಬೆಳೆಯುತ್ತ ಬೆಳೆಯುತ್ತ ತಮ್ಮ ಕೋಪವನ್ನು ಹದ್ದಿನಲ್ಲಿಟ್ಟುಕೊಳ್ಳಲು ಪ್ರಯತ್ನಿಸುವರು.

ಮಕ್ಕಳು ಪದೇ ಪದೇ ಕೋಪಗೊಳ್ಳುವುದಕ್ಕೂ ಮತ್ತು ಹಾಗೆ ಕೋಪಬಂದಾಗ ವರ್ತಿಸುವ ರೀತಿಗಳಿಗೂ ಅವರ ತಂದೆ ತಾಯಿಗಳ ಶಿಕ್ಷಣವೇ ಕಾರಣ. ಮಕ್ಕಳು ಹಟಹಿಡಿದು ಕೋಪ ದಿಂದಿರುವಾಗ ತಂದೆತಾಯಿಗಳು ಅವರನ್ನು ಸಮಾಧಾನ ಪಡಿ ಸಲು ಅನೇಕ ರೀತಿಯಲ್ಲಿ ವರ್ತಿಸುವರು. ಕೆಲವರು ತಾವೇ ಕೋಪಗೊಂಡು ಮಕ್ಕಳನ್ನು ಬಯ್ದು ಹೊಡೆದು ಅವರಲ್ಲಿ ಭೀತಿ ಯನ್ನುಂಟುಮಾಡುವರು. ಮತ್ತೆ ಕೆಲವರು ಕೋಪವನ್ನು ಶಮನಮಾಡುವುದಕ್ಕಾಗಿ ಮಕ್ಕಳಿಗೆ ಇಷ್ಟವಾದ ಪದಾರ್ಥಗ ಳನ್ನು ಕೊಡುವರು. ಅಥವಾ ಪ್ರಾರಂಭದಲ್ಲಿ ಕೋಪಗೊಂಡು ಕೊನೆಯಲ್ಲಿ ಮಕ್ಕಳ ಇಚ್ಛೆಯನ್ನು ಪೂರ್ಣಗೊಳಿಸುವರು. ಇನ್ನು ಕೆಲವರು ಕೋಪಗೊಂಡಿರುವ ಮಕ್ಕಳನ್ನು ಪರಿಹಾಸ್ಯ ಮಾಡಿ ಮತ್ತಷ್ಟು ರೇಗಿಸುವರು; ಮಕ್ಕಳನ್ನು ಮಾತನಾಡಿಸದೆ ಅವ ರನ್ನು ದೂರ ಅಟ್ಟುವರು, ಅಥವಾ ಅವರ ಕೋಪವನ್ನು ಲಕ್ಷಿ ಸದೆ ಇರುವರು.

ತಂದೆತಾಯಿಯರ ಈ ಒಂದೊಂದು ವರ್ತನೆಯೂ ಮಕ್ಕಳ ಮೇಲೆ ಒಂದೊಂದು ಪರಿಣಾಮವನ್ನುಂಟುಮಾಡುವುದು. ಮಕ್ಕಳನ್ನು ಹೊಡೆದು ಬೈದು ಅವರಲ್ಲಿ ಹೆದರಿಕೆಯನ್ನು ಹುಟ್ಟಿ ಸಿದರೆ ಅವರ ವ್ಯಕ್ತಿತ್ವದ ಬೆಳವಣಿಗೆಗೆ ಹಾನಿಯುಂಟಾಗುವುದು; ಮಗುವಿಗೆ ತಂದೆತಾಯಿಯರಲ್ಲಿರುವ ಪ್ರೀತಿಮರ್ಯಾದೆಗಳು ಕಡಮೆಯಾಗುವುವು. ಕೋಪಗೊಂಡ ಮಕ್ಕಳಿಗೆ ಬೇಕಾದ ಉಪಚಾರವನ್ನು ಮಾಡಿ ಅವರ ಕೋಪವನ್ನು ನಿವಾರಿಸಲು ಯತ್ನಿಸುವುದೂ ದುಷ್ಪರಿಣಾಮಕರವಾದುದು; ತಮ್ಮ ಇಷ್ಟ ಪೂರ್ತಿಗಾಗಿ ಮಕ್ಕಳು ಪದೇ ಪದೇ ಹಠಹಿಡಿಯುವರು. ಹೀಗೆ ಹಠವನ್ನೇ ಇವರು ಒಂದು ಅಸ್ತ್ರವಾಗಿ ಮಾಡಿಕೊಳ್ಳುವರು.

ಮಕ್ಕಳ ಕೋಪವನ್ನು ಕಡಮೆಮಾಡಬೇಕಾದರೆ ತಂದೆ ತಾಯಿಯರು ಅವರ ಕೋಪವನ್ನು ಲಕ್ಷಿಸದೆ ಇರಬೇಕು; ಮತ್ತು ಅವರಿಗೆ ತಮ್ಮ ಕೋಪದಿಂದ ಏನೂ ಪ್ರಯೋಜನವಿಲ್ಲವೆಂಬ ಅರಿವನ್ನುಂಟುಮಾಡಬೇಕು. ಮಕ್ಕಳಿಗೆ ಕೋಪಬರುವ ವೇಳೆಯಲ್ಲಿ ಅವರ ಗಮನವನ್ನು ಮತ್ತೊಂದು ಕಡೆ ತಿರುಗಿದರೂ ಅವರ ಕೋಪ ಶಮನವಾಗುವುದು. ಮಗುವಿನ ಯಾವ ಇಚ್ಛೆಗೆ ಭಂಗಬಂದು ಅದು ಕೋಪಗೊಂಡಿದೆಯೋ ಆ ಇಚ್ಛೆಯು ತನಗೆ ಒಳ್ಳೆಯದಲ್ಲವೆಂದು ತಂದೆತಾಯಿಯರು ಬುದ್ಧಿಹೇಳುವುದರಿಂದಲೂ ಅನೇಕವೇಳೆ ಮಗುವು ಶಾಂತವಾಗುವುದು. ಮುಖ್ಯವಾಗಿ ತಂದೆತಾಯಿಯರು ಮಗುವಿಗೆ ತನ್ನ ಕೋಪದಿಂದ ಎಳ್ಳಷ್ಟೂ ಲಾಭವಾಗುವುದಿಲ್ಲವೆಂಬುದನ್ನು ಸ್ಪಷ್ಟಪಡಿಸಬೇಕು; ಮತ್ತು ಈ ವಿಷಯವು ಅವರ ಮನಸ್ಸಿಗೆ ತಟ್ಟುವಂತೆ ವರ್ತಿಸಬೇಕು.

ಭಯ ಕ್ರೋಧ ಮೊದಲಾದ ಭಾವೋದ್ರೇಕಗಳಂತೆ ಅಸೂಯೆ ಒಂದು ಹುಟ್ಟುಗುಣವಲ್ಲ. ಮಗುವಿಗೆ ಅಸೂಯೆಯುಂಟಾಗಲು ತನ್ನ ತಾಯಿತಂದೆಗಳು ಇತರ ಮಕ್ಕಳನ್ನು ಪ್ರೀತಿಸುವರೆಂಬ ಸಂಶಯವೂ ತಾಯಿತಂದೆಗಳ ಪ್ರೀತಿ ತನ್ನಲ್ಲೇ ಪೂರ್ತಿಯಾಗಿಯಿರಬೇಕೆಂಬ ಆಸೆಯೂ ಮುಖ್ಯಕಾರಣಗಳು. ತಮ್ಮ ಸುತ್ತಮುತ್ತ ಇರುವ ಜನರು ತನ್ನ ಆಸೆಗೆ ಅಡ್ಡಿಬರುವುದರಿಂದ ಅಸೂಯೆಹುಟ್ಟುವುದು.

ಅಸೂಯೆಯು ಕೋಪವನ್ನುಂಟುಮಾಡುವುದು; ಆದರೆ ಅಸೂಯೆಯಿಂದಾದ ಕೋಪ ಸಾಮಾನ್ಯಕೋಪದಂತೆ ಕ್ಷಣಿಕವಲ್ಲ; ಅದು ದೀರ್ಘಕಾಲವಿರುವುದು. ಸಾಧಾರಣವಾಗಿ ದೊಡ್ಡ ಮಗುವಿಗೆ ಚಿಕ್ಕಮಗುವಿನಮೇಲೆ ಅಸೂಯೆಯುಂಟಾಗುವುದು.

ತಾಯಿಯು ತನ್ನ ತಂಗಿಯನ್ನಾಗಲಿ ತಮ್ಮನನ್ನಾಗಲಿ ಹಾಲು ಕೊಟ್ಟು ಆದರಿಸಿದರೆ ಈ ದೊಡ್ಡ ಮಗುವಿಗೆ ತಾಯಿಯಮೇಲೆ ಕೋಪವೂ ಆದರ ಪಡೆಯುತ್ತಿರುವ ಮಗುವಿನಮೇಲೆ ಅಸೂಯೆಯೂ ಉಂಟಾಗುವುವು. ದೊಡ್ಡ ಮಗುವಿಗೆ ತನ್ನ ತಮ್ಮನ ಮೇಲೆ ಅಸೂಯೆಹುಟ್ಟಿದಾಗ ಅವನನ್ನು, ಹೊಡೆಯುವುದು, ಜಿಗುಟುವುದು ಅಥವಾ ತಳ್ಳುವುದು. ತನ್ನ ತಮ್ಮನಂತೆಯೇ ಆಟಗಳನ್ನಾಡಿ ತಾಯಿತಂದೆಗಳ ಪ್ರೀತಿಗೆ ಪಾತ್ರನಾಗಬೇಕೆಂಬ ಆಸೆ ಹುಟ್ಟಿ ದೊಡ್ಡ ಮಗುವೂ ಸಣ್ಣ ಮಗುವಿನಂತೆಯೇ ವರ್ತಿಸಲು ಪ್ರಾರಂಭಿಸುವುದು. ಈ ಅನುಕರಣಕ್ಕೆ ತಮ್ಮನ ಮೇಲಿನ ಅಸೂಯೆಯೇ ಮುಖ್ಯಕಾರಣ. ಹತ್ತುಹನ್ನೆರಡು ತಿಂಗಳಿನ ಮಗು ಅಂಬೆಗಾಲಿಟ್ಟು ಆಡುತ್ತಿದ್ದರೆ ತಾಯಿಗೆ ಪ್ರೀತಿಹುಟ್ಟಿ ಅದನ್ನು ಎತ್ತಿ ಮುದ್ದಾಡುವಳು; ಇದನ್ನು ನೋಡುತ್ತಿರುವ ಮೂರು ನಾಲ್ಕುವರ್ಷದ ಮಗುವು ತಾನೂ ಆರೀತಿ ಅಂಬೆಗಾಲಿಟ್ಟು ಆ ಮೂಲಕ ತಾಯಿಯ ಆದರವನ್ನು ಪಡೆಯುವುದಕ್ಕೆ ಪ್ರಾರಂಭಿಸುವುದು. ಸಾಧಾರಣವಾಗಿ ದೊಡ್ಡ ಮಕ್ಕಳನ್ನು ಚಿಕ್ಕಮಕ್ಕಳು ಅನುಕರಿಸುತ್ತಾರೆ. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಅಸೂಯೆಯಿಂದ ದೊಡ್ಡಮಕ್ಕಳು ಚಿಕ್ಕಮಕ್ಕಳನ್ನೇ ಅನುಕರಿಸುವರು.

ಸಾಧಾರಣವಾಗಿ ಅಸೂಯೆ ವಿಶೇಷವಾಗಿ ಕಾಣಿಸಿಕೊಳ್ಳುವುದು ಮೊದಲನೆಯ ಮಗುವಿನಲ್ಲಿ. ಮೊದಲನೆಯ ಮಗುವು ಎರಡು ಮೂರು ವರ್ಷಗಳ ಕಾಲ ಮನೆಯಲ್ಲಿರುವವರೆಲ್ಲರಿಗೂ ಮುದ್ದಿನ ಮಗುವಾಗಿರುವುದು. ಆದರೆ ಎರಡನೆಯ ಮಗು ಹುಟ್ಟಿದಮೇಲೆ ಮನೆಯವರು ಇದುವರೆಗೂ ತನ್ನ ಮೇಲಿಟ್ಟಿದ್ದ ಪ್ರೀತಿಯು ಸಣ್ಣ ಮಗುವಿನ ಕಡೆಗೆ ತಿರುಗುವುದರಿಂದ ಸಣ್ಣ

ಮಗುವಿನ ಮೇಲೆ ಅದಕ್ಕೆ ಅಸೂಯೆ ಹುಟ್ಟುವುದು. ಆದುದರಿಂದಲೇ ಸಾಮಾನ್ಯವಾಗಿ ಎರಡು ಮೂರು ಮಕ್ಕಳಿರುವ ಕುಟುಂಬದಲ್ಲೇ ಮಿತಿಮೀರಿದ ಅಸೂಯೆಯು ಕಂಡುಬರುವುದು. ನಾಲ್ಕಾರು ಮಕ್ಕಳಿರುವ ದೊಡ್ಡ ಸಂಸಾರಗಳಲ್ಲಿ ಈ ಅಸೂಯೆಯು ಅಷ್ಟು ಹೆಚ್ಚಾಗಿ ಕಂಡುಬರುವುದಿಲ್ಲ. ಇದು ದೊಡ್ಡ ಕುಟುಂಬದಲ್ಲಿ ಬೆಳೆದ ಮಕ್ಕಳಿಗಿರುವ ಒಂದು ಅನುಕೂಲ.

ಮನೆಯ ಮಕ್ಕಳ ಮೇಲೆ ಹುಟ್ಟಿದ ಅಸೂಯೆಯು ಕಾಲಕ್ರಮದಲ್ಲಿ ಮನೆಯ ಹೊರಗಿನವರ ಮೇಲಿನ ಹೊಟ್ಟೆಕಿಚ್ಚಾಗಿ ಪರಿಣಮಿಸುವುದು. ಬಾಲಕನು ಶಾಲೆಯಲ್ಲಿ ಓದುತ್ತಿರುವಾಗ ತನ್ನ ಜೊತೆಯವರಿಗೆ ಆಟದಲ್ಲಾಗಲಿ ಓದಿನಲ್ಲಾಗಲಿ ಏನಾದರೂ ಪುರಸ್ಕಾರ ದೊರೆತರೆ ಬಾಲಕನಿಗೆ ಅವರ ಮೇಲೆ ಅಸೂಯೆ ಹುಟ್ಟುವುದು. ಅಸೂಯೆಯು ಬಹುವಾಗಿ ಬೆಳೆದವರಿಗೆ ಜೀವನದಲ್ಲಿ ಸುಖ ಇಲ್ಲದಂತಾಗುವುದು. ಸಮಾಜದಲ್ಲಿ ಸಾಮಾನ್ಯವಾಗಿ ನಾವು ಅನುಭವಿಸುವ ವ್ಯಸನಗಳು ನಮ್ಮ ಇಚ್ಛೆಗೆ ಕುಂದುಕ ಬಂದುದರಿಂದ ಅಷ್ಟಾಗಿ ಹುಟ್ಟಿದುವಲ್ಲ; ತಮಗೆ ಲಭಿಸದುದು ಬೇರೆಯವರಿಗೆ ಲಭಿಸಿತಲ್ಲಾ ಎಂಬ ಮಾತ್ಸರ್ಯ ಮತ್ತು ಅತೃಪ್ತಿಗಳಿಂದ ಹೆಚ್ಚಾಗಿ ಉಂಟಾದುವು. ಆದಕಾರಣ ಸಣ್ಣ ಮಕ್ಕಳಲ್ಲಿಯೇ ಅಸೂಯೆಯ ಮೊಳಕೆಯನ್ನು ಮೂಲೋತ್ಪಾಟನ ಮಾಡುವುದು ತಾಯಿತಂದೆಗಳ ಮುಖ್ಯ ಕರ್ತವ್ಯ. ಅಸೂಯೆ ಹುಡುಗರಲ್ಲಿ ಬೆಳೆಯದಂತೆ ನೋಡಿಕೊಳ್ಳುವುದು ಶಿಕ್ಷಣದ ಒಂದು ಮುಖ್ಯಧ್ಯೇಯ. ತಂದೆತಾಯಿಯರು ಮಕ್ಕಳ ವಿಷಯದಲ್ಲಿ ಅತಿ ಪ್ರೇಮವನ್ನಾಗಲಿ ಅತಿ ಉದಾಸೀನವನ್ನಾಗಲಿ ತೋರಿಸದೆ ಇರಬೇಕು. ಅತಿಯಾಗಿ

ಮುದ್ದಿಸಲೂ ಕೂಡದು, ಅತಿಯಾಗಿ ಶಿಕ್ಷಿಸಲೂ ಕೂಡದು. ಮಕ್ಕಳ ಪೋಷಣೆಯಲ್ಲಿ ಮಧ್ಯವರ್ತನೆಯು ಬಹಳ ಮುಖ್ಯವಾದುದು.

---

## ೫. ನಗು ಮತ್ತು ಅಳು

ನಗು ಮತ್ತು ಅಳು ಭಾವಗಳಲ್ಲದಿದ್ದರೂ ಅವು ಸಂತೋಷ, ಕೋಪ, ಭಯ ಮುಂತಾದ ಭಾವಗಳೊಂದಿಗೆ ತೋರ್ಪಡಿಸಿಕೊಳ್ಳುವುವು ; ಇವು ಭಾವಗಳಿಗೆ ಹತ್ತಿರ ಸಂಬಂಧದ ವರ್ತನೆಗಳು. ಇವು ಯಾವ ರೀತಿಯಲ್ಲಿ ಹುಟ್ಟಿ ಬೆಳೆಯುವುವು ಎಂಬುದನ್ನು ಈ ಅಧ್ಯಾಯದಲ್ಲಿ ವಿವರಿಸಿದೆ.

ಹುಟ್ಟಿ ಹತ್ತು ಹದಿನೈದು ದಿವಸಗಳಾದ ಮಗುವು ಕೆಲವು ಸಮಯಗಳಲ್ಲಿ ಮುಗುಳ್ನಗೆಯನ್ನು ತೋರಿಸುವುದು. ಸಾಧಾರಣವಾಗಿ ಈ ಮುಗುಳ್ನಗೆಯು ಹಾಲನ್ನು ಕುಡಿದು ತೃಪ್ತಿ ಹೊಂದಿರುವ ಸಮಯದಲ್ಲಿ ಕಾಣಬರುವುದು. ಒಂದೂವರೆ-ಎರಡು ತಿಂಗಳ ವಯಸ್ಸಿನ ಮಕ್ಕಳು ತಂದೆ ತಾಯಿಗಳನ್ನು ನೋಡಿದ ಸಮಯದಲ್ಲಿ ಅಥವಾ ಅವರ ಧ್ವನಿಯನ್ನು ಕೇಳಿದ ಸಮಯದಲ್ಲಿ ಮುಗುಳ್ನಗೆ ನಗುವುವು. ತಂದೆತಾಯಿಯರನ್ನು ನೋಡಿ ಉಂಟಾಗುವ ನಗುವು ಸಂಸರ್ಗಜನ್ಯವಾದುದೆಂದು ಶಾಸ್ತ್ರಜ್ಞರು ಅಭಿಪ್ರಾಯಪಡುವರು. ಮೊದಲಲ್ಲಿ ದೈಹಿಕ ತೃಪ್ತಿಯೇ ಈ

ಮುಗುಳ್ನಗೆಗೆ ಮೂಲಕಾರಣವಾದರೂ ಕಾಲಕ್ರಮದಲ್ಲಿ ಈ ತೃಪ್ತಿಯನ್ನು ಯಾರು ಉಂಟುಮಾಡುವರೋ ಅಥವಾ ಈ ತೃಪ್ತಿಪಡೆದಿರುವ ಸಮಯದಲ್ಲಿ ತನ್ನ ಹತ್ತಿರ ಯಾರು ಇರುವರೋ ಅವರನ್ನು ನೋಡಿದಾಗಲೂ ಅದೇ ಮುಗುಳ್ನಗೆಯು ಹೊರಸೂಸುವುದು.

ಮೂರು ನಾಲ್ಕು ತಿಂಗಳು ವಯಸ್ಸಾಗಿರುವ ಮಕ್ಕಳ ಮುಂದೆ ಹೋಗಿ ದೊಡ್ಡವರು ಕೋಪ, ಭಯ ಮುಂತಾದ ಯಾವ ಭಾವೋದ್ರೇಕಗಳನ್ನು ವ್ಯಕ್ತಪಡಿಸಿದರೂ ಆಗ ಮಗುವು ಮುಗುಳ್ನಗೆ ನಗುವುದು. ಅಂತಹ ಮಗುವಿಗೆ ಎಲ್ಲಾ ಭಾವೋದ್ರೇಕಗಳಿಗೂ ಒಂದೇ ಪ್ರತಿಕ್ರಿಯೆ ಹುಟ್ಟುವುದು. ಆದರೆ ಆರೇಳು ತಿಂಗಳು ವಯಸ್ಸಿನ ಮಕ್ಕಳ ಮುಂದೆ ನಾವು ಯಾವ ಭಾವೋದ್ರೇಕವನ್ನು ತೋರಿಸುವೆವೋ ಅದಕ್ಕನುಗುಣವಾದ ಮುಖಭಾವವನ್ನು ಅವರು ಪ್ರತಿಕ್ರಿಯೆಯಾಗಿ ವ್ಯಕ್ತಪಡಿಸಿರುವರು. ದೊಡ್ಡವರು ಕೋಪವನ್ನು ತೋರಿಸಿದರೆ ಮಗು ಭಯವನ್ನು ವ್ಯಕ್ತಪಡಿಸುವುದು; ನಾವು ನಕ್ಕರೆ ಪ್ರತಿಯಾಗಿ ಅದೂ ನಗುವುದು. ಇನ್ನೂ ಸ್ವಲ್ಪ ವಯಸ್ಸಾದ ಮೇಲೆ, ಅಂದರೆ ಹತ್ತು ಹನ್ನೆರಡು ತಿಂಗಳಾದಮೇಲೆ ನಾವು ಕೋಪಗೊಂಡಂತೆ ನಟನೆ ಮಾಡಿದಾಗ ಅದು ಮೊದಲಲ್ಲಿ ಭಯವನ್ನು ವ್ಯಕ್ತಪಡಿಸಿ ಆಮೇಲೆ ಮುಗುಳ್ನಗೆ ನಗುವುದು.

ಒಂದು ತಿಂಗಳು ವಯಸ್ಸಿನ ಮಗುವು ಯಾವುದಾದರೂ ಬಣ್ಣದ ಸಾಮಾನುಗಳನ್ನು ನೋಡಿದರೆ ನಗುವುದು. ಇನ್ನು ಕೆಲವು ದಿವಸಗಳಲ್ಲಿ ಇಂಪಾದ ಶಬ್ದವನ್ನು ಕೇಳಿದರೆ ಅಥವಾ ತನಗೆ ಪರಿಚಯವುಳ್ಳವರ ಮುಖವನ್ನು ನೋಡಿದರೆ ನಗುವುದು. ಮೂರುತಿಂಗಳ ಮಗುವಿನ ಹತ್ತಿರ ನಾವು ಹೋಗಿ ಆಟವಾಡಿಸಿ

ಮಾತನಾಡಿಸಿದರೆ ಅದು ನಗುವುದು. ನಾಲ್ಕುತಿಂಗಳು ವಯ ಸ್ಸಾದಮೇಲೆ ಮುಖದಮೇಲೆ ಒಂದು ಪರದೆಯಂತೆ ಬಟ್ಟೆಹಾಕಿ ತಕ್ಷಣ ಪರದೆಯನ್ನು ತೆಗೆದರೆ ಮಗು ಕೇಕೆಹಾಕಿಕೊಂಡು ನಗು ವುದು; ಹಾಗೆಯೇ ಅದರ ಮುಖದಮೇಲೆ ಬಗ್ಗಿ "ಬೂ" ಎಂದು ಶಬ್ದ ಮಾಡಿದಾಗಲೂ ನಗುವುದು. ಆರುತಿಂಗಳ ಮಗು ವನ್ನು ಮೇಲಕ್ಕೆ ಸ್ವಲ್ಪ ಹಾರಿಸಿ ಕೆಳಗೆ ಬರುವಾಗ ಆತುಕೊಂ ಡರೆ ಅದು ಬಹಳ ನಗುವುದು. ಹೀಗೆ ಮಾಡಿದಾಗ ಮೊದಲಲ್ಲಿ ಅದು ಸ್ವಲ್ಪ ಭಯದ ಸೂಚನೆಯನ್ನು ತೋರಿಸಿ ಭಯಪಡ ಬೇಕಾದ್ದಿಲ್ಲವೆಂದು ಮನಗಂಡೊಡನೆಯೇ ಬಹಳವಾಗಿ ನಗು ಹುಟ್ಟುತ್ತದೆ.

ಮಗುವು ಬೆಳೆಯುತ್ತ ಬೆಳೆಯುತ್ತ ಕ್ರಮೇಣ ನಗುವನ್ನು ಹುಟ್ಟಿಸುವ ಸನ್ನಿವೇಶಗಳೂ ಹೆಚ್ಚುವುವು. ಮೊಟ್ಟಮೊದಲು ನಗುವನ್ನು ಹುಟ್ಟಿಸುವ ಸನ್ನಿವೇಶಗಳು ದೈಹಿಕತೃಪ್ತಿಗೆ ಸಂಬಂಧ ಪಟ್ಟವು. ಇನ್ನು ಸ್ವಲ್ಪಕಾಲವಾದಮೇಲೆ ಸಲಿಗೆಯುಳ್ಳ ಜನರು ನಗುವಿಗೆ ಕಾರಣರಾಗುವರು. ಇನ್ನೂ ಕೆಲವು ತಿಂಗಳಾದಮೇಲೆ ಭಯ ಅಥವಾ ಆಶ್ಚರ್ಯವನ್ನುಂಟುಮಾಡಬಹುದಾದ ಸನ್ನಿವೇ ಶಗಳು ನಿಜವಾಗಿಯೂ ಭಯಂಕರವಲ್ಲವೆಂದು ತಿಳಿದಾಗ ಮಗುವು ನಗುವನ್ನು ಪ್ರಕಟಿಸುವುದು. ವಿಚಿತ್ರವಾದ ಆಟದ ಸಾಮಾನುಗಳನ್ನು ಕಂಡರೆ ಮಗುವಿಗೆ ಮೊದಲು ಭಯವುಂ ಟಾಗಿ ಅನಂತರ ನಗು ಹುಟ್ಟುವುದು. ಮಗುವಿಗೆ ಒಂದೂವರೆ ಅಥವಾ ಎರಡುವರ್ಷ ವಯಸ್ಸಾದಮೇಲೆ ನಗುವು ಮಗುವಿನ ಗೆಲುವು ಉತ್ಸಾಹಗಳನ್ನು ಸೂಚಿಸುವುದು. ಈ ಕಾಲದಲ್ಲಿ ಮಗುವಿಗೆ ತಾನು ಯಾವುದಾದರೂ ಪದಾರ್ಥಗಳಿಂದ ಶಬ್ದವನ್ನು ಮಾಡಿದಾಗ ಅಥವಾ ಮರಳಿನಿಂದಲೋ ಮರದ ಕರಣಗಳಿಂ

ದಲೋ ಮನೆಯನ್ನು ಕಟ್ಟಿದಾಗ ಉಂಟಾದ ಉತ್ಸಾಹ ನಗುವಾಗಿ ಪರಿಣಮಿಸುವುದು. ಇತರ ಮಕ್ಕಳೊಡನೆ ಆಟವಾಡುತ್ತಿರುವಾಗ ಒಂದು ಮಗುವು ಮತ್ತೊಂದು ಮಗುವನ್ನು ಹಿಡಿಯುವುದಕ್ಕಾಗಿ ಓಡಲು ಆ ಮಗುವು ಸಿಕ್ಕದೆ ತಪ್ಪಿಸಿಕೊಂಡರೆ ಈ ವಿನೋದವು ಇಬ್ಬರಿಗೂ ನಗುವನ್ನುಂಟುಮಾಡುವುದು. ಈ ವಯಸ್ಸಿನಲ್ಲಿ ಓಟಗಳೇ ಹೆಚ್ಚಾಗಿ ನಗುವನ್ನುಂಟುಮಾಡುವ ಸನ್ನಿವೇಶಗಳು.

ಸಣ್ಣಮಕ್ಕಳು ಕೋಪ ಭಯ ಮುಂತಾದ ಭಾವಗಳನ್ನು ವ್ಯಕ್ತಪಡಿಸುವಾಗ ದೇಹವೆಲ್ಲವನ್ನೂ ಹೇಗೆ ಉಪಯೋಗಿಸುವರೋ ಹಾಗೆಯೇ ಹೆಚ್ಚಾಗಿ ನಗಬೇಕಾಗಿರುವ ಸಂದರ್ಭಗಳಲ್ಲಿ ದೇಹಾದ್ಯಂತವನ್ನೂ ಉಪಯೋಗಿಸುವರು. ದೊಡ್ಡವರಲ್ಲಿ ಕೂಡ ಕೆಲವು ಸಮಯಗಳಲ್ಲಿ ಇದೇ ವಿಧವಾದ ವರ್ತನೆಯು ಕಾಣಬರುವುದು. ಹಿಡಿಯಲಾರದಷ್ಟು ನಗು ಬಂದಾಗ ದೊಡ್ಡವರು ಹೀಗೆ ನಗುವರು.

ಮೂರು ನಾಲ್ಕು ವರ್ಷಗಳ ಮಗುವು ತಾನು ಮಾಡಿದ ತಪ್ಪುಗಳನ್ನು ತಿಳಿದು ತಾನೇ ನಗುವುದಕ್ಕೆ ಪ್ರಾರಂಭಿಸುವುದು. ಇದು ಮಕ್ಕಳ ಬೆಳವಣಿಗೆಯಲ್ಲಿ ಒಂದು ಮುಖ್ಯವಾದ ಒಳ್ಳೆಯ ಅಂಶ. ಸೋಲನ್ನೂ ನಿರಾಶೆಯನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ಅದನ್ನೇ ಪರಿಹಾಸ್ಯಕರವಾಗಿ ಎಣಿಸಿ ನಗುವುದು ಒಂದು ರಕ್ಷಣೆಯ ಉಪಾಯ. ಮಕ್ಕಳಲ್ಲಿ ಈ ಹಾಸ್ಯಮನೋಭಾವವು ಬೆಳೆಯುವುದಕ್ಕೆ ನಾವು ಚಿಕ್ಕಂದಿನಿಂದಲೇ ಅವರಿಗೆ ಸಹಾಯ ಮಾಡಬೇಕು. ಹಾಗೆ ಮಾಡದಿದ್ದರೆ ಕಷ್ಟನಿಷ್ಠುರಗಳನ್ನೂ ಸೋಲುನಿರಾಕರಣೆಗಳನ್ನೂ ಬಹುವಾಗಿ ಮನಸ್ಸಿಗೆ ಹಚ್ಚಿ

ಕೊಂಡು ಕೊರಗುವ ಮನೋವೃತ್ತಿ ಏರ್ಪಡುವುದು ; ನಿರಾಶಾವಾದಿಗಳಾಗುವರು.

ಮಗುವು ಹುಟ್ಟಿದ ಕೂಡಲೇ ಅಳುವುದಕ್ಕೆ ಪ್ರಾರಂಭಿಸುವುದು. "ನಾನು ಭೂಲೋಕದಲ್ಲಿ ಹುಟ್ಟಿದೆನಲ್ಲಾ" ಎಂಬ ಪರಿತಾಪವನ್ನು ಮಗುವು ಈ ಮೂಲಕ ಸೂಚಿಸುತ್ತದೆಂದು ಹೇಳುವುದುಂಟು. ಆದರೆ ಮಗುವು ಹುಟ್ಟಿದ ಕೂಡಲೇ ಅದರ ದೇಹಾದ್ಯಂತದಲ್ಲೂ ಉಂಟಾಗುವ ಚಲನೆಯೇ ಈ ಅಳುವಿಗೆ ಕಾರಣ ; ಮಗುವು ಹುಟ್ಟಿದಕೂಡಲೇ ಶ್ವಾಸವನ್ನು ತೆಗೆದುಕೊಂಡಾಗ ಉಂಟಾಗುವ ಶಬ್ದವೇ ಅಳು. ಮೊಟ್ಟಮೊದಲು ಅಳುವು ಹುಟ್ಟುವುದು ಶ್ವಾಸಕೋಶ, ಕರುಳು, ಹೊಟ್ಟೆ ಮೊದಲಾದ ಒಳಗಿನ ಅವಯವಗಳ ಅಸ್ವಸ್ಥತೆಯ ದೆಸೆಯಿಂದ. ಕಾಲಕ್ರಮದಲ್ಲಿ ಇತರ ಅವಯುವಗಳಲ್ಲಿ ಹುಟ್ಟಿದ ನೋವು ದೇಹಾಲಸ್ಯ, ನಿದ್ರಾಭಂಗ, ಹಸಿವು ಇವು ಮಗುವಿನ ಅಳುವಿಗೆ ಕಾರಣಗಳಾಗುವುವು. ಈ ಹಸಿವನ್ನೂ ನೋವನ್ನೂ ನಿವಾರಣೆಮಾಡಿದರೆ ಅಳುವು ನಿಲ್ಲುವುದು. ಅಳುತ್ತಿರುವ ಮಗುವನ್ನು ಎತ್ತಿಕೊಂಡ ಕೂಡಲೆ ಮಗುವು ಅಳುವನ್ನು ನಿಲ್ಲಿಸುವುದು. ಮಗುವಿಗೆ ಆರೆಂಟು ತಿಂಗಳಾದ ಮೇಲೆ ಹೊರಗಿನ ಕಾರಣಗಳಿಂದಲೂ ಅಳುವುಂಟಾಗುವುದು. ಹೆದರಿಕೆಯುಂಟಾದಾಗ ಅಥವಾ ಏಟುತಗುಲಿದಾಗ ಅದು ಅಳುವುದು. ತನ್ನ ಇಷ್ಟಕ್ಕೆ ಅಡಚಣೆಯುಂಟಾದಾಗ ಕೋಪ, ಅದರ ಜತೆಯಲ್ಲಿ ಅಳುವೂ ಹುಟ್ಟುವುದು. ಮೂರುನಾಲ್ಕುವರ್ಷದ ಮಕ್ಕಳಲ್ಲಿ ದೇಹಾಲಸ್ಯಕ್ಕಿಂತಲೂ ಕೋಪವೇ ಹೆಚ್ಚಾಗಿ ಅವರ ಅಳುವಿಗೆ ಕಾರಣ.

ಅಳುವುದರ ಮೂಲಕ ಮಗುವು ತನ್ನ ಆಸೆಗಳನ್ನು ಪೂರ್ಣ

ಗೊಳಿಸಿಕೊಳ್ಳಲು ಪ್ರಯತ್ನಪಡುವುದು. ಆಗ ಅಳುವುದು ಕಷ್ಟ ನಿವಾರಣೆಗಾಗಿ ಅಲ್ಲ, ತನ್ನ ಆಸೆಯ ಪರಿತೃಪ್ತಿಗಾಗಿ. ಮಗುವು ದೇಹದ ಅಸ್ವಸ್ಥತೆಯಿಂದ ಅತ್ತಾಗ ತಾಯಿತಂದೆಗಳು ಅದರ ಅಸ್ವಸ್ಥತೆಯನ್ನು ನಿವಾರಣೆಮಾಡಿ ಮಗುವನ್ನು ಸಮಾಧಾನ ಪಡಿಸುವುದು ಉಚಿತ; ಆದರೆ ಮಗುವು ತನ್ನ ಆಶೆಗಳನ್ನು ತೃಪ್ತಿಗೊಳಿಸಿಕೊಳ್ಳಲು ಅತ್ತಾಗ ತಂದೆತಾಯಿಯರು ಮಗುವನ್ನು ನಿರ್ಲಕ್ಷ್ಯದಿಂದ ಕಾಣಬೇಕು. ಇಲ್ಲದಿದ್ದರೆ ತನಗೆ ಏನು ಬೇಕಾದರೂ ಮಗುವು ಅತ್ತು ಕಾಡುವುದು. ಈ ರೀತಿಯ ವರ್ತನೆಯು ಮಗುವಿನ ಮನಸ್ಸಿನ ಬೆಳವಣಿಗೆಗೆ ಒಳ್ಳೆಯದಲ್ಲ. ದೊಡ್ಡವರಾದಮೇಲೂ ಅವರು ತಮಗೆ ಬೇಕಾದ ಕೆಲಸಗಳನ್ನು ತಮಗೊದಗಿದ ಕಷ್ಟಗಳನ್ನು ತಾವೇ ಬುದ್ಧಿವಂತಿಕೆಯಿಂದ ಶ್ರಮಪಟ್ಟು ಬಗೆಹರಿಸಿಕೊಳ್ಳದೆ ಇತರರ ಮುಂದೆ ಗೋಳಾಡಿ ಅವರ ಸಹಾಯಪಡೆಯುವರು.

---

## ೬. ಭಾವಶಿಕ್ಷಣ

**ಕ್ರೋಧಾದ್ಭವತಿ ಸಂಮೋಹಸ್ಸಂಮೋಹಾತ್ ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥**
**ರಾಗ ದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥**

**(ಭಗವದ್ಗೀತೆ)**

ಮನುಷ್ಯನಿಗೆ ಯಾವಾಗ ತೀವ್ರ ವಿಷಯಾಸಕ್ತಿಯುಂಟಾಗುವುದೋ ಆಗ ಕಾಮಕ್ರೋಧಾದಿ ಭಾವೋದ್ರೇಕಗಳಿಂದ ಅವನಿಗೆ ಆತ್ಮಸಂಯಮವಿಲ್ಲದೆ ಹೋಗುವುದು. ತಮ್ಮ ಇಚ್ಛೆ ಪ್ರತಿಹತವಾದರೆ ಆಗ ಕ್ರೋಧವು ಉಂಟಾಗುವುದು. ಈ ಕ್ರೋಧವು ಬುದ್ಧಿಯನ್ನು ಕೆಡಿಸುವುದು. ವ್ಯಕ್ತಿತ್ವವು ಅವ್ಯವಸ್ಥೆ ಹೊಂದುವುದು. ಮನುಷ್ಯನು ತನ್ನ ರಾಗದ್ವೇಷಗಳನ್ನು ನಿಗ್ರಹಿಸಿದರೆ ಆಗ ಮನಸ್ಸು ತನ್ನ ಸ್ವಾಧೀನವಾಗುವುದು.

ಹೀಗೆ ಮನೋಭಾವಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದನ್ನು ಭಾವಶಿಕ್ಷಣವೆಂದು ಕರೆಯಬಹುದು. ಇದುವರೆಗೂ ವಿವರಿಸಿದ ಹಾಗೆ ಮಗುವು ಬೆಳೆಯುತ್ತ ಬೆಳೆಯುತ್ತ ಭಯ, ಕೋಪ ಮುಂತಾದ ಭಾವಗಳು ತನ್ನ ಆವರಣದಲ್ಲಿರುವ ಮನುಷ್ಯರ ಮೇಲೆಯೂ ಇತರ ಪದಾರ್ಥಗಳ ಮೇಲೆಯೂ ಉದ್ರಿಕ್ತವಾಗುವುವು. ಈ ಭಾವಾವೇಶಗಳನ್ನು ಮನುಷ್ಯನು ಉಚಿತ ಮಾರ್ಗದಲ್ಲಿ ಉಪಯೋಗಿಸಿದರೆ ಅವು ಅವನಿಗೆ ಹಿತಕಾರಿಗಳಾಗಿಯೂ ಇಲ್ಲದಿದ್ದರೆ ಹಾನಿಕರವಾಗಿಯೂ ಪರಿಣಮಿಸುವುವು. ಈ ಮನೋಭಾವಗಳಿಂದ ಜನಿಸುವ ಶಕ್ತಿಗಳು ನಮ್ಮ ವರ್ತನೆಗೆ ಬಹಳ ಅನುಕೂಲವಾದುವು ; ಇವು ಜೀವನದ ಕಾರ್ಯಗಳಲ್ಲಿ ಆಸಕ್ತಿಯನ್ನು ಹುಟ್ಟಿಸಿ ಜೀವನವನ್ನು ರಸಭರಿತವನ್ನಾಗಿ ಮಾಡುವುವು. ಆದರೆ ಇವುಗಳನ್ನು ನಾವು ಒಂದು ಹತೋಟಿಯಲ್ಲಿಟ್ಟಿರಬೇಕು. ನಮ್ಮ ಭಾವಗಳು ಅತಿ ತೀವ್ರವಾದರೆ ಗೀತೆಯಲ್ಲಿ ಹೇಳಿದಂತೆ ಬುದ್ಧಿ ನಾಶವಾಗಿ ನಮ್ಮ ಪ್ರತಿಕ್ರಿಯೆಗಳ ಮೇಲೆ ನಮಗೆ ಸ್ವಾಧೀನವಿಲ್ಲದೆ ಹೋಗುವುದು. ದಮನ ಶಕ್ತಿಯು ಚಿಕ್ಕ ವಯಸ್ಸಿನಿಂದಲೂ ಬೆಳೆಯಬೇಕು. ಮಕ್ಕಳಿಗೆ ತಮ್ಮ ಭಾವಗಳ ಮೇಲೆ ಸ್ವಾಧೀನವುಂ

ಟಾಗಬೇಕಾದರೆ ತಂದೆತಾಯಿಗಳು ಅವರಿಗೆ ಚಿಕ್ಕಂದಿನಿಂದಲೂ ತಕ್ಕ ಆವರಣವನ್ನು ಕಲ್ಪಿಸಿಕೊಡಬೇಕು. ಇತ್ತೀಚಿಗೆ ಫ್ರಾಯ್ಡ್ ಎಂಬ ಪ್ರಸಿದ್ಧ ಮನಶ್ಶಾಸ್ತ್ರಜ್ಞನು ಮಕ್ಕಳಿಗೆ ಭಾವ ಶಿಕ್ಷಣ ಬಹಳ ಮುಖ್ಯವಾದುದೆಂದು ಬೋಧಿಸಿರುವನು. ಮನಶ್ಶಾಂತಿಯಿಲ್ಲದಿರುವ ಅಥವಾ ಉನ್ಮತ್ತರಾದ ವಯಸ್ಕ ರನ್ನು ಪರೀಕ್ಷಿಸಿದುದರಲ್ಲಿ ಅವರ ದುರವಸ್ಥೆಗೆ ಅವರು ಸಣ್ಣ ಮಕ್ಕಳಾಗಿರುವಾಗ ಭಾವಶಿಕ್ಷಣ ಹದಗೆಟ್ಟುದೇ ಕಾರಣ ವೆಂದು ತಿಳಿಯಬಂದಿದೆ. ದೊಡ್ಡವರಾದಮೇಲೆ ಹುಟ್ಟಬೇಕಾದ ಮನಶ್ಶಾಂತಿಗೆ ಈ ಸಣ್ಣ ವಯಸ್ಸಿನಲ್ಲಿ ದೊರಕುವ ಭಾವ ಶಿಕ್ಷಣವೇ ಅಸ್ತಿಭಾರವಾಗಿರುವುದು. ಬಹಳ ತೊಡಕಾದ ಮತ್ತು ಅಗಾಧವಾದ ಈ ಭಾವ ಶಿಕ್ಷಣದ ವಿಷಯವಾಗಿ ಈ ಪುಟ್ಟ ಪುಸ್ತಕದ ಒಂದು ಅಧ್ಯಾಯದಲ್ಲಿ ನಾಲ್ಕಾರು ಮಾತು ಗಳನ್ನು ಮಾತ್ರ ಹೇಳಲು ಸಾಧ್ಯ.

ಸಾಧಾರಣವಾಗಿ ನಾವು ಮಕ್ಕಳನ್ನು ಆಟದ ಗೊಂಬೆಗಳಂತೆ ಭಾವಿಸುತ್ತೇವೆ. ನಮಗೆ ಸಂತೋಷವಾಗಿರುವಾಗ ಅವರನ್ನು ಹತ್ತಿರ ಕರೆದು ಮುದ್ದಾಡುತ್ತೇವೆ; ನಾವು ಕೆಲಸಗಳಲ್ಲಿ ತೊಡಗಿ ರುವಾಗ ಅಥವಾ ನಮಗೆ ಅಸಮಾಧಾನವುಂಟಾಗಿರುವಾಗ ಅವರನ್ನು ನಿರ್ಲಕ್ಷಿಸಿ ದೂರಮಾಡುತ್ತೇವೆ. ಹೀಗೆ ಮಕ್ಕಳ ಜೊತೆಯಲ್ಲಿ ನಾವು ಯಾವರೀತಿ ವರ್ತಿಸುವೆವೆಂಬುದು ನಮ್ಮ ಆ ಕ್ಷಣದ ಮನೋಭಾವಗಳನ್ನು ಅನುಸರಿಸಿರುತ್ತದೆ. ನಮ್ಮ ಈ ವರ್ತನೆಯು ಮಕ್ಕಳ ಮನಸ್ಸಿನಮೇಲೆ ಒಂದು ದುಷ್ಪರಿಣಾ ಮವನ್ನುಂಟುಮಾಡುವುದು. ಅವರಿಗೆ ನಮ್ಮನ್ನು ಕಂಡರೆ ಹೆದ ರಿಕೆಯುಂಟಾಗುವುದು. ನಾವು ಅವರನ್ನು ಆದರಿಸಿ ಕರೆಯುತ್ತೇ ವೆಯೋ ಅಥವಾ ಕೋಪಿಸಿಕೊಂಡು ದೂರಮಾಡುತ್ತೇವೆಯೋ

ಎಂಬ ಸಂಶಯವು ಅವರಲ್ಲಿ ಹುಟ್ಟುವುದು. ಈ ಸಂಶಯದಿಂದ ಅವರ ಮನಸ್ಸಿನಲ್ಲಿ ಒಂದು ಒಳಕೋಟೆಯುಂಟಾಗುವುದು. ಇಂತಹ ಒಳಕೋಟೆಯು ಯಾವಾಗಲೂ ಮಕ್ಕಳ ಮನಸ್ಸನ್ನಾ ಕ್ರಮಿಸಿದರೆ ಅದು ಅವರ ವ್ಯಕ್ತಿತ್ತ್ವಕ್ಕೆ ಕುಂದುತರುವುದು. ಆದುದರಿಂದ ನಾವು ಅವರಿಗೂ ಆತ್ಮಗೌರವ, ಕೋಪ, ತಾಪ ಗಳಿವೆ ಎಂಬುದನ್ನು ಅಲಕ್ಷಿಸಿ ವರ್ತಿಸಬಾರದು. ಅವರ ವ್ಯಕ್ತಿತ್ವದ ವಿಕಸನಕ್ಕೆ ತಕ್ಕ ಸಲಕರಣೆಗಳನ್ನೊದಗಿಸುವುದು ನಮ್ಮ ಧರ್ಮ.

ಅಮೆರಿಕಾದೇಶದಲ್ಲಿ ಒಂದು ಶಿಶುವಿಹಾರದಲ್ಲಿ ಮಧ್ಯಾಹ್ನದ ಹೊತ್ತಿನಲ್ಲಿ ಆ ಶಾಲೆಯ ಮಕ್ಕಳ ತಾಯಿಯರೇ ಬಂದು ಆ ಮಕ್ಕಳನ್ನುನೋಡಿಕೊಳ್ಳುವರು. ಇಂತಹ ಶಾಲೆಗೆ ಒಬ್ಬ ಮನಶ್ಶಾಸ್ತ್ರಜ್ಞನು ಮಕ್ಕಳ ಬುದ್ಧಿಯನ್ನಳೆಯಲೆಂದು ಹೋದನು. ಆ ಸಮಯದಲ್ಲಿ ಒಬ್ಬೊಬ್ಬ ತಾಯಿಯು ಮಕ್ಕಳ ಜೊತೆಯಲ್ಲಿ ಯಾವರೀತಿ ವರ್ತಿಸುವಳೆಂಬುದನ್ನು ಪರಿಶೀಲಿಸಿ ನೋಡಿದನು. ಒಂದೇ ಸನ್ನಿವೇಶದಲ್ಲಿ ಬೇರೆ ಬೇರೆ ತಾಯಂದಿರು ಬೇರೆ ಬೇರೆ ರೀತಿಗಳಲ್ಲಿ ವರ್ತಿಸುವರೆಂಬುದು ಕಂಡು ಬಂತು. ಉದಾಹರಣೆಗೆ, ಮಗುವು ಅನುಚಿತವಾದ ಆಟವನ್ನು ಆಡುತ್ತಿರುವಾಗ ಒಬ್ಬ ತಾಯಿಯು ಆ ಮಗುವನ್ನು ಲಕ್ಷಿಸದೆ ಆಟ ಆಡಲೆಂದು ಬಿಟ್ಟುಬಿಟ್ಟಳು. ಇನ್ನೊಬ್ಬಾಕೆ ಹುಡುಗನನ್ನು ಬಯ್ದು ಆ ಕೆಲಸ ಮಾಡಬೇಡವೆಂದು ದೂರ ತಳ್ಳಿದಳು. ಮತ್ತೊಬ್ಬ ತಾಯಿ ಮಗುವನ್ನು ಹೀಯಾಳಿಸಿ, ಅವನ ಸಂಗಡಿಗರನ್ನು ಬಹು ಒಳ್ಳೆಯವರೆಂದು ಹೊಗಳಿದಳು. ಮತ್ತೊಬ್ಬ ತಾಯಿಯು ಆರೀತಿ ಆಡಬಾರದೆಂದು ಗದರಿಸಿಬಿಟ್ಟಳು; ಆದರೆ ಅದು ಆಡಿತೋ ಬಿಟ್ಟಿತೋ ಎನ್ನುವುದನ್ನು ಗಮನಿಸಲಿಲ್ಲ. ಹೀಗೆ ತಾಯಿಯರು ಒಬ್ಬೊಬ್ಬರೂ ಒಂದೊಂದು ವಿಧವಾಗಿ ವರ್ತಿಸುವುದು ಮಕ್ಕಳಲ್ಲಿ

ಕುವ ವಿವಿಧ ವ್ಯಕ್ತಿತ್ವಗಳಿಗೆ ಒಂದು ಕಾರಣ. ಮಗುವು ಹಠ ಮಾಡುತ್ತ ಅಳುತ್ತಿದ್ದರೆ ಕೆಲವು ತಂದೆತಾಯಿಗಳು ಹಠಮಾಡಿದರೂ ಚಿಂತೆಯಿಲ್ಲ ಎಂದು ಸುಮ್ಮನಿರುವರು. ಆದರೆ ಮತ್ತೆ ಕೆಲವರು ಹಠಮಾಡುವ ಮಗುವಿಗೆ ಯಾವುದು ಬೇಕಾಗಿದೆಯೋ ಅದನ್ನು ಕೊಟ್ಟು ಸಮಾಧಾನಪಡಿಸುವರು. ಕೆಲವರು ತಮ್ಮ ಮಕ್ಕಳನ್ನು ಬೇರೆಯವರ ಎದುರಿಗೆ ಅತಿಯಾಗಿ ಹೊಗಳುವರು; ಮತ್ತೆ ಕೆಲವರು ಅವರ ಎದುರಿಗೆ ನಿಂದಿಸುವರು. ಕೆಲವರು "ಗೊಗ್ಗಯ್ಯ, ಗುಮ್ಮ" ಎಂದು ಹೆದರಿಸುವರು. ಈ ರೀತಿಯ ವರ್ತನೆಗಳು ಮಕ್ಕಳಲ್ಲಿ ದುಷ್ಪರಿಣಾಮವನ್ನುಂಟುಮಾಡುವುವು. ತಂದೆತಾಯಿಗಳು ಮಕ್ಕಳೊಡನೆ ಯಾವಾಗಲೂ ಏಕರೀತಿಯಿಂದ ವರ್ತಿಸಬೇಕು; ಮಕ್ಕಳ ವಿಚಾರದಲ್ಲಿ ಒಂದು ಸಮಯದಲ್ಲಿ ಅತಿ ಕಠಿಣವಾಗಿಯೂ ಮತ್ತೊಂದು ಸಮಯದಲ್ಲಿ ಅತಿ ಸರಸವಾಗಿಯೂ ಇದ್ದರೆ ಮಕ್ಕಳ ಜೀವಣಿಗೆಯು ಎಂದಿಗೂ ಕ್ರಮಬದ್ಧವಾಗಲಾರದು.

ಮನೆಯಲ್ಲಿ ಬೆಳೆದ ಮಕ್ಕಳು ಊಟಮಾಡುವಾಗ, ಮಲಮೂತ್ರ ವಿಸರ್ಜನೆ ಮಾಡುವಾಗ, ಮುಖ ತೊಳೆಯುವಾಗ, ಸ್ನಾನಮಾಡುವಾಗ, ಮಲಗಿಕೊಳ್ಳುವಾಗ ಸಾಧಾರಣವಾಗಿ ಅಳುವರು. ಆದರೆ ಅದೇ ಸನ್ನಿವೇಶಗಳಲ್ಲಿ ಶಿಶುವಿಹಾರಗಳಲ್ಲಿ ಬೆಳೆದ ಮಕ್ಕಳು ಅಳುವುದಿಲ್ಲ. ಮನೆಯಲ್ಲಿ ಮಕ್ಕಳನ್ನು ನೋಡಿಕೊಳ್ಳುವುದಕ್ಕೂ ಶಿಶುವಿಹಾರಗಳಲ್ಲಿ ಮಕ್ಕಳನ್ನು ನೋಡಿಕೊಳ್ಳುವುದಕ್ಕೂ ಇರುವ ವ್ಯತ್ಯಾಸವೇ ಇದಕ್ಕೆ ಕಾರಣ; ಶಿಶುವಿಹಾರದಲ್ಲಿ ಉಪಾಧ್ಯಾಯಿನಿಯರು ಮಕ್ಕಳಿಗೆ ಊಟಮಾಡಿಸುವಾಗ, ಮುಖ ತೊಳೆಯುವಾಗ, ಬಟ್ಟೆ ಹಾಕುವಾಗ ಪ್ರತಿದಿನವೂ ಒಂದೇ ಕ್ರಮಬದ್ಧವಾದ ರೀತಿಯಲ್ಲಿ ನಡೆದುಕೊಳ್ಳುವರು. ಆದ

ಕಾರಣ ಮಕ್ಕಳು ಈ ಕೆಲಸಗಳನ್ನು ಸರಾಗವಾಗಿ ಮಾಡುವರು. ಸಾಧಾರಣವಾಗಿ ಮನೆಗಳಲ್ಲಿ ದೊಡ್ಡವರು ಈ ರೀತಿ ಒಂದೇ ಪ್ರಕಾರ ಕ್ರಮಬದ್ಧವಾಗಿ ನಡೆಯುವುದು ಅಸಂಭವ. ಕೆಲವು ಸಮಯಗಳಲ್ಲಿ ಈ ಕೆಲಸಗಳನ್ನು ಆತುರದಿಂದ ಮಾಡಿಸುವರು; ಕೆಲವು ಸಮಯಗಳಲ್ಲಿ ನಿಧಾನವಾದರೂ ಸುಮ್ಮನಿರುವರು. ಕೆಲವುವೇಳೆ ಬೇಸರಪಡುವರು; ಕೆಲವುವೇಳೆ ತಮ್ಮ ಮನಸ್ಸಿನ ಕೋಪವನ್ನು ಮಕ್ಕಳ ಮೇಲೆ ತೋರಿಸುವರು. ಹೀಗೆ ಮಾಡುವುದರಿಂದ ಎಲ್ಲಾ ಸಮಯದಲ್ಲೂ ಮಕ್ಕಳು ಒಂದೇ ಸಮನಾಗಿ ವರ್ತಿಸುವುದಿಲ್ಲ. ಅನೇಕವೇಳೆ ಮಕ್ಕಳು ತಮ್ಮ ಈ ಕಾರ್ಯಗಳನ್ನು ದೊಡ್ಡವರ ಪ್ರೀತಿ ಗಳಿಸುವುದಕ್ಕೋಸ್ಕರ ಮಾಡುವರು; ಇದು ತಂದೆತಾಯಿಯರ ಅಸಮನ್ವರ್ತನೆಯ ಒಂದು ಪರಿಣಾಮ.

ನಮ್ಮಿಂದ ಉಪಚಾರವನ್ನು ನಿರೀಕ್ಷಿಸದೆ ಮಕ್ಕಳು ತಮ್ಮ ಕೆಲಸಗಳನ್ನು ಮಾಡುವುದನ್ನು ಕಲಿಸಬೇಕು. ಮಕ್ಕಳು ಬೆಳೆಯುತ್ತ ಬೆಳೆಯುತ್ತ ಪರಾಧೀನದಿಂದ ಬಿಡುಗಡೆ ಹೊಂದಿ ಸ್ವತಂತ್ರರಾಗಬೇಕೆಂಬುದು ಮಕ್ಕಳ ಶಿಕ್ಷಣದ ಮುಖ್ಯಧ್ಯೇಯ. ಅವರು ಸಣ್ಣವರಾಗಿರುವಾಗ, ಮುಖ್ಯವಾಗಿ ಮೊದಲನೆಯ ಮೂರು ನಾಲ್ಕು ವರ್ಷಗಳಲ್ಲಿ ತಮ್ಮ ತಾಯಿತಂದೆಗಳ ಅಧೀನದಲ್ಲಿಯೇ ಇರುವರು. ಮಕ್ಕಳಿಗೆ ಅತ್ತಿತ್ತ ಓಡಾಡುವುದಕ್ಕೆ, ತಮ್ಮ ಇಚ್ಛೆಗಳನ್ನು ಪೂರ್ತಿಗೊಳಿಸಿಕೊಳ್ಳುವುದಕ್ಕೆ ದೊಡ್ಡವರ ಬೆಂಬಲವಿಲ್ಲದೆ ಆಗುವುದಿಲ್ಲ. ಇಂಥ ಮಕ್ಕಳು ತಾವೇ ಸ್ವತಃ ತಮ್ಮ ಕೆಲಸಗಳನ್ನು ಮಾಡಿಕೊಂಡು ಸ್ವತಂತ್ರರಾಗಿ ಬೆಳೆಯುವಂತೆ ದೊಡ್ಡವರಾದ ನಾವು ಅವರಿಗೆ ಸಹಾಯ ಮಾಡಬೇಕು.

ಪ್ರಾರಂಭದಿಂದಲೂ ಮಕ್ಕಳು ಸ್ವತಂತ್ರರಾಗಿರಲು ಪ್ರಯತ್ನ

ಪಡುವರು. ಅಂಬೆಗಾಲಿಡುವ ಸಮಯದಲ್ಲಿ ಕೂಡ ಮಕ್ಕಳು ಮನೆಯಲ್ಲೆಲ್ಲ ತಮ್ಮಿಷ್ಟಕ್ಕೆ ತಾವೇ ಓಡಾಡಲು ಪ್ರಯತ್ನಪಡುವರು. ಇನ್ನು ಸ್ವಲ್ಪ ಬೆಳೆದ ಮೇಲೆ ತಿಂಡಿತೀರ್ಥಗಳನ್ನು ತಾವೇ ತೆಗೆದುಕೊಳ್ಳಬೇಕೆಂದು ಹಠಹಿಡಿಯುವರು. ಮತ್ತೆ ಸ್ವಲ್ಪ ದೊಡ್ಡವರಾಗಲು ಸ್ನಾನ, ಬಟ್ಟೆಹಾಕಿಕೊಳ್ಳುವುದು ಈ ಮೊದಲಾದ ಕಾರ್ಯಗಳನ್ನೂ ತಮಗೆ ಸಾಮರ್ಥ್ಯವಿಲ್ಲದಿದ್ದರೂ ತಾವೇ ಮಾಡಬೇಕೆಂದು ಹಟಹಿಡಿಯುವರು. ಹೀಗೆ ಮಕ್ಕಳು ಸ್ವಾತಂತ್ರ್ಯವನ್ನು ಕೋರುವುದು ಸ್ವಾಭಾವಿಕ. ಆದರೆ ಅವರ ಈ ರೀತಿಯ ವರ್ತನೆಯು ತಾಯಂದಿರಿಗೆ ಸ್ವಲ್ಪ ತೊಂದರೆಯನ್ನೂ ಸ್ವಲ್ಪ ಕಾಲಹರಣವನ್ನೂ ಉಂಟುಮಾಡುವುದು. ತಾಯಂದಿರು ಮಕ್ಕಳಿಗೆ ಸ್ವಾತಂತ್ರ್ಯದಿಂದ ತಮ್ಮ ಕೆಲಸಗಳನ್ನು ಮಾಡಿಕೊಳ್ಳಲು ಸಹಾಯಮಾಡಿ ಮುಂದೆ ಅವರಿಗೂ ತಮಗೂ ಅನುಕೂಲವಾಗುವ ರೀತಿಯಲ್ಲಿ ವರ್ತಿಸಬೇಕು. ಕೆಲವು ತಾಯಂದಿರಿಗೆ ತಮ್ಮ ಮಕ್ಕಳು ಪ್ರತಿಯೊಂದು ಕೆಲಸಕ್ಕೂ ತಮ್ಮ ಸಹಾಯವನ್ನು ಕೋರದಿದ್ದರೆ ಸಮಾಧಾನವಿಲ್ಲ. ಆದರೆ ಇದು ಮಕ್ಕಳಿಗೆ ಬಹಳ ಕೆಟ್ಟುದು. ಈ ರೀತಿ ಬೆಳೆದಿರುವ ಮಕ್ಕಳು ದೊಡ್ಡವರಾದರೂ ಪರಾಧೀನರಾಗಿಯೇ ಇರಲು ಆಶಿಸುವರು. ಮನೆಯಲ್ಲಿ ದೊರಕುವ ಸಹಾನುಭೂತಿ ಸಹಾಯಗಳನ್ನು ಹೊರಗೂ ಅಪೇಕ್ಷಿಸಿ ಅವು ದೊರಕದಿರಲು ಹತಾಶರಾಗುವರು. ಕೆಲವು ಮಂದಿ ವಯಸ್ಕರು ನಿರುದ್ಯೋಗಿಗಳಾಗಿಯೂ ತಮ್ಮ ಜೀವನದಲ್ಲಿ ನಿರುತ್ಸಾಹಿಗಳಾಗಿಯೂ ಇರಲು ಈ ರೀತಿ ಚಿಕ್ಕಂದಿನಿಂದಲೂ ಪರಾಧೀನತೆಯಲ್ಲಿ ಬೆಳೆದಿರುವುದೇ ಮುಖ್ಯಕಾರಣ. ಅಲ್ಲದೆ ಈ ಪರಾಧೀನತೆ ಅವರ ದಾಂಪತ್ಯಜೀವನದಲ್ಲಿಯೂ ಒಂದು ದುಷ್ಪರಿಣಾಮವನ್ನುಂಟುಮಾಡು

ವುದು. ತಾಯಿಗೆ ಅಧೀನನಾಗಿರುವ ಮಗನು ತನ್ನ ಹೆಂಡತಿಯ ಮೇಲೆ ಅಷ್ಟೊಂದು ಪ್ರೀತಿವಿಶ್ವಾಸಗಳನ್ನು ಸಾಮಾನ್ಯವಾಗಿ ತೋರಿಸಲಾರನು; ಹಾಗೆಯೇ ತಂದೆಯಲ್ಲಿ ಹೆಚ್ಚುಪ್ರೀತಿಯಿರುವ ಮಗಳಿಗೆ ಕೈಹಿಡಿದ ಗಂಡನಲ್ಲಿ ಸಾಮಾನ್ಯವಾಗಿ ಹೆಚ್ಚು ಪ್ರೀತಿ ವಿಶ್ವಾಸಗಳಿರಲಾರವು. ಇದರಿಂದ ಗೃಹಕೃತ್ಯದಲ್ಲಿ ಅನೇಕ ಕಿರುಕುಳವುಂಟಾಗುವುದು. ಆದುದರಿಂದ ತಂದೆತಾಯಿಯರು ಮಕ್ಕಳು ಚಿಕ್ಕಂದಿನಿಂದ ಕೈಲಾದಷ್ಟು ಸ್ವತಂತ್ರರಾಗಿರಲು ಅವರಿಗೆ ಅವಕಾಶಕೊಡಬೇಕು.

ಉಪಯೋಗಿಸುತ್ತಾ ಉಪಯೋಗಿಸುತ್ತಾ ಕತ್ತಿ ಹೇಗೆ ಹೆಚ್ಚು ಹೆಚ್ಚು ಹೊಳೆಯುವುದೋ ಹಾಗೆಯೇ ಬುದ್ಧಿ ಶಕ್ತಿಯೂ ಸಹ ಉಪಯೋಗದಿಂದ ಹೆಚ್ಚು ಹೆಚ್ಚು ಚುರುಕಾಗುವುದು. ಬೆಳೆಯುತ್ತಿರುವ ಮಗುವಿಗೆ ಯಾವುದಾದರೂ ಒಂದು ಕೆಲಸ ವನ್ನು ಮಾಡಬೇಕೆಂದು ಕುತೂಹಲವಿರುವುದು. ಅವರ ದೈಹಿಕ ಬೆಳವಣಿಗೆಗೆ ಅತ್ಯಂತ ಸಹಕಾರಿ; ಹಗಲೆಲ್ಲಾ ಚಟುವಟಿಕೆ ಯಿಂದಿರುವುದೇ ಬೆಳೆಯುವ ಹುಡುಗನ ಸ್ವಭಾವ. ಆದ್ದರಿಂ ದಲೇ ನಾಲ್ಕೈದು ವರ್ಷಗಳವರೆಗೂ ಮಕ್ಕಳು ಯಾವಾಗಲೂ ಚಟುವಟಿಕೆಯಿಂದಿರುವರೇ ಹೊರತು ಸೋಮಾರಿಗಳಾಗಿರುವು ದಿಲ್ಲ. ಈ ವಯಸ್ಸಿನಲ್ಲಿ ಅವರಿಗೆ ಓಡಾಡುವುದಕ್ಕೆ ಮತ್ತು ಕೆಲಸಮಾಡುವುದಕ್ಕೆ ಸಲಕರಣೆಗಳು ಸರಿಯಾಗಿಲ್ಲದಿದ್ದರೆ ದೊಡ್ಡವರ ಹತ್ತಿರ ಬಂದು ಅವರ ಕೆಲಸಗಳಿಗೆ ಅಡಚಣೆ ಯನ್ನುಂಟುಮಾಡುವರು. ಈ ಚೇಷ್ಟೆಗಳಿಗೆ ಮುಖ್ಯಕಾರಣ ಅವರಿಗೆ ಆಟಪಾಟಗಳಿಗೆ ಅವಕಾಶಗಳನ್ನು ಕಲ್ಪಿಸದಿರುವುದು. ಆದುದರಿಂದಲೇ ನಾವು ಅವರಿಗೆ ಕೈಲಾದಷ್ಟು ಆಟದ ಸಾಮಾ ನುಗಳನ್ನು ಒದಗಿಸಿಕೊಡಬೇಕು. ಅದರಲ್ಲಿಯೂ ಮಗುವಿನ

ಕಲ್ಪನಾ ಶಕ್ತಿಯನ್ನು ಪ್ರಚೋದನಗೊಳಿಸುವಂತಹವಾದರೆ ಉತ್ತಮ. ಈ ದೃಷ್ಟಿಯಿಂದ ಮರದ ಗೊಂಬೆಗಳಿಗಿಂತ ಹತ್ತಿ ಪ್ಪತ್ತು ಮರದ ಕರಣಗಳೇ ಉತ್ತಮ. ಮಕ್ಕಳಿಗೆ ಆಟದ ಸಾಮಾನುಗಳನ್ನು ಮುರಿದು ಅವುಗಳನ್ನು ಜೋಡಿಸು ವುದೆಂದರೆ ಆಸೆ. ಆದುದರಿಂದ ಬೆಲೆಯುಳ್ಳ ಗೊಂಬೆಗಳನ್ನು ಕೊಡದೆ ಸುಲಭವಾಗಿ ಕಿತ್ತು ಪುನಃ ಜೋಡಿಸಬಹುದಂಥ ಭಾಗಗಳುಳ್ಳ ಆಟದ ಸಾಮಾನುಗಳನ್ನೇ ಕೊಡಬೇಕು.

ಶಾಲೆಗೆ ಹೋಗುವ ದೊಡ್ಡ ಮಕ್ಕಳು ಕೆಲವು ವೇಳೆ ಸೋಮಾರಿತನವನ್ನು ತೋರಿಸುವರು. ಈ ಸೋಮಾರಿತನಕ್ಕೆ ಮುಖ್ಯಕಾರಣಗಳು ಅನಾರೋಗ್ಯ, ಮತ್ತು ಕೆಲಸದಲ್ಲಿ ಅಭಿ ರುಚಿಯಿಲ್ಲದೆ ಇರುವುದು. ಶಾಲೆಯ ಪಾಠಗಳನ್ನು ಹುಡುಗರಿಗೆ ಅಭಿರುಚಿ ಹುಟ್ಟುವ ಹಾಗೆ ಹೇಳಿಕೊಟ್ಟರೆ ಆಗ ಸೋಮಾರಿ ತನವು ಎಂದಿಗೂ ಇರಲಾರದು. ಇದನ್ನು ಬಿಟ್ಟು ಹುಡುಗ ನನ್ನು "ನೀನು ಸೋಮಾರಿ, ಓದು ನಿನ್ನ ತಲೆಗೆ ಹತ್ತುವು ದಿಲ್ಲ" ಎಂದು ಮೂದಲಿಸಿ ಬಯ್ದರೆ ಅದರಿಂದ ಬಹಳ ಕೆಡುಕುಂ ಟಾಗುವುದು ; ಹುಡುಗನಿಗೆ ವಿದ್ಯೆಯಲ್ಲಿ ನಿರಾಶೆ ಹುಟ್ಟಿ ಅವನು ಖಂಡಿತ ಹಿಂದೆ ಬೀಳುವನು. ಹುಡುಗನಿಗೆ ದೊಡ್ಡವರ ಮಾತಿನಲ್ಲಿ ಬಹಳ ನಂಬಿಕೆ. ದೊಡ್ಡವರು ತನ್ನನ್ನು ಕೆಲಸಕ್ಕೆ ಬಾರದವನೆಂದು ಬಯ್ದರೆ ತಾನು ಕೆಲಸಕ್ಕೆ ಬಾರದವನೆಂದೇ ನಂಬಿ ಹಿಂದುಳಿಯುವನು. ಅಣ್ಣತಮ್ಮಂದಿರಲ್ಲಿ, ಅಕ್ಕತಂಗಿಯ ರಲ್ಲಿ ಅಸೂಯೆ ಹುಟ್ಟುವುದಕ್ಕೆ ಇದು ಮೂಲಕಾರಣ. ಯಾವಾ ಗಲೂ ಇತರ ಹುಡುಗರನ್ನು ಹೊಗಳಿ ಈ ಹುಡುಗನನ್ನು ನಿಂದಿಸಿದರೆ ಅವನಲ್ಲಿ ತಾನು ಕೀಳೆಂಬ ಭಾವನೆಯು ಶಾಶ್ವತ ವಾಗಿ ನಿಲ್ಲುವುದು ; ಮತ್ತು ಇತರ ಹುಡುಗರಲ್ಲಿ ದ್ವೇಷ ಮತ್ತು

ಅಸೂಯೆ ಹುಟ್ಟುವುದು. ಮಗುವಿಗೆ ಯಾವಾಗಲೂ ಸ್ವಾಭಿಮಾನ ಹೆಚ್ಚು. ಅವನನ್ನು ದೊಡ್ಡವರೆದುರಿಗಾಗಲಿ, ಬೇರೆ ಮಕ್ಕಳೆದುರಿಗಾಗಲಿ ಅವಮಾನಪಡಿಸಿದರೆ ಬಹಳ ಪರಿತಾಪ ಪಡುವನು; ಮತ್ತು ಈ ಪರಿತಾಪವನ್ನು ತಕ್ಷಣವೇ ಯಾರ ಮೇಲಾದರೂ ರೇಗಿಬಿದ್ದು ವ್ಯಕ್ತಪಡಿಸುವನು; ನೆರೆಹೊರೆಯವರು ಮನೆಗೆ ಬಂದಾಗ ತಾಯಿತಂದೆಗಳಿಗೆ ಬೇಸರ ಹುಟ್ಟುವಂತೆ ವರ್ತಿಸುವನು. ಇಂಥಾ ಸಮಯದಲ್ಲಿ ಅವನನ್ನು ಬಯ್ಯದೆ ಯಾವುದಾದರೂ ಇತರ ಕೆಲಸವನ್ನುಮಾಡುವಂತೆ ಹೇಳಬೇಕು.

ಹಿಂದಿನ ಅಧ್ಯಾಯಗಳಲ್ಲಿ ಹೇಳಿರುವ ಹಾಗೆ ದೊಡ್ಡ ಮಕ್ಕಳಲ್ಲಿರುವ ಅನೇಕ ಹೆದರಿಕೆಗಳು ಹುಟ್ಟುಹೆದರಿಕೆಗಳಲ್ಲ; ಅವು ಸಂಸರ್ಗಜನ್ಯವಾದ ಹೆದರಿಕೆಗಳು. ಆದುದರಿಂದ ಮಕ್ಕಳನ್ನು ಎಚ್ಚರಿಕೆಯಿಂದ ನೋಡಿಕೊಂಡರೆ ಅವರಿಗೆ ಕತ್ತಲೆ, ಕಳ್ಳರು ಮೃಗಗಳು, ಹೊಸಬರು ಮುಂತಾದವರ ವಿಷಯದಲ್ಲಿರುವ ಹೆದರಿಕೆಗಳನ್ನು ತಪ್ಪಿಸಬಹುದು. ಮಗುವು ಯಾವುದಾದರೂ ಒಂದು ಚೇಷ್ಟೆಯನ್ನು ಮಾಡುತ್ತಿರುವಾಗ, ಅದನ್ನು ತಪ್ಪಿಸಲು ತಂದೆತಾಯಿಗಳು "ಗುಮ್ಮ ಬರುತ್ತಾನೆ" ಎಂದು ಸಾಧಾರಣವಾಗಿ ಹೆದರಿಸುವರು. ಈರೀತಿ ಹೆದರಿಕೆಯನ್ನು ಮಗುವಿನಲ್ಲಿ ಉಂಟುಮಾಡುವುದು ಅನುಚಿತ. ಹೀಗೆ ಹುಟ್ಟಿದ ಹೆದರಿಕೆಗಳು ಸುಪ್ತಚೇತನದಲ್ಲಿದ್ದು ದೊಡ್ಡವರಾದ ಮೇಲೂ ಅವರನ್ನು ಪೀಡಿಸುವುವು. ಆದುದರಿಂದ ತಾಯಿತಂದೆಗಳು ಈ ರೀತಿಯ ಹೆದರಿಕೆಗಳು ಮಕ್ಕಳಲ್ಲಿ ಹುಟ್ಟದ ಹಾಗೆ ಜಾಗರೂಕತೆಯಿಂದ ನೋಡಿಕೊಳ್ಳಬೇಕು.

ಮಕ್ಕಳು ಯಾವುದಾದರೂ ಒಂದು ತಪ್ಪುಕೆಲಸವನ್ನು ಮಾಡಿದರೆ ತಂದೆತಾಯಿಯರು ಸಾಮಾನ್ಯವಾಗಿ ಅವರನ್ನು

ಗದರಿಸಿ ಶಿಕ್ಷಿಸುವರು. ಇದರಿಂದ ಮಗುವಿಗೆ ಗದರಿಸಿ ಹೊಡೆಯುವವರಲ್ಲಿ ಒಂದು ಹೆದರಿಕೆಯುಂಟಾಗುವುದು. ಶಿಕ್ಷೆಯ ಉದ್ದೇಶ ಮಗುವು ಕೆಟ್ಟ ಕೆಲಸವನ್ನು ಮಾಡದೆ ಇರಲೆಂದು. ಆದರೆ ಹೀಗೆ ಶಿಕ್ಷಿಸುವುದರಿಂದ ಯಾರು ಶಿಕ್ಷಿಸುತ್ತಾರೆಯೋ ಅವರಲ್ಲಿ ಮಗುವಿಗೆ ಹೆದರಿಕೆಯು ಹುಟ್ಟುವುದು. ಹುಡುಗರು ಸುಳ್ಳು ಹೇಳಲು ಈ ರೀತಿಯ ಹೆದರಿಕೆ ಒಂದು ಮುಖ್ಯ ಕಾರಣ. ನಿಜವನ್ನು ಹೇಳಿದರೆ ಎಲ್ಲಿ ತಂದೆತಾಯಿಯರು ಕೋಪಬಂದು ಹೊಡೆಯುವರೋ ಎಂದು ಸುಳ್ಳು ಹೇಳಿ ಶಿಕ್ಷೆಯನ್ನು ತಪ್ಪಿಸಿಕೊಳ್ಳಲು ಪ್ರಯತ್ನಮಾಡುವರು. ಈ ಸುಳ್ಳು ಹೇಳುವುದೇ ಕ್ರಮೇಣ ಒಂದು ದುರಭ್ಯಾಸವಾಗುವುದು. ಆದ್ದರಿಂದ ತಂದೆ ತಾಯಿಗಳು ತಮ್ಮಲ್ಲಿ ಮಕ್ಕಳಿಗೆ ಹೆದರಿಕೆಯುಂಟಾಗದ ರೀತಿಯಲ್ಲಿ ವರ್ತಿಸಬೇಕು. ಯಾವಾಗಲೂ ತಾವು ಮಕ್ಕಳ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿರಬೇಕು. ಮಕ್ಕಳಿಗೆ ಯಾವ ರೀತಿಯಾದ ಕಷ್ಟ ಅಥವಾ ಸಂಶಯಗಳುಂಟಾದರೂ ಅವುಗಳನ್ನು ಪರಿಹರಿಸಿಕೊಳ್ಳಲು ತಾಯಿತಂದೆಗಳ ಸಹಾಯವನ್ನು ಕೋರುವಷ್ಟು ಅವರಲ್ಲಿ ಸಲಿಗೆ ಮತ್ತು ಪ್ರೀತಿ ವಿಶ್ವಾಸಗಳಿರಬೇಕು. ಹೀಗೆ ಮಕ್ಕಳಿಗೆ ತಾಯಿತಂದೆಗಳಲ್ಲಿ ಸಲಿಗೆ ಪ್ರೀತಿ ವಿಶ್ವಾಸಗಳಿಲ್ಲದಿರುವುದೇ ಮಕ್ಕಳು ದುರ್ಮಾರ್ಗಕ್ಕೆ ಬೀಳಲು ಕಾರಣ.

ಮಕ್ಕಳು ಅನುಚಿತವಾದ ಕೆಲಸವನ್ನು ಮಾಡಿದರೆ ಕೂಡಲೇ ಅವರನ್ನು ಗದರಿಸಬೇಕು. ಅದು ಕೆಟ್ಟಕೆಲಸವೆಂದು ಅವರ ಮನಸ್ಸಿಗೆ ಹತ್ತುವಂತೆ ತಿಳಿವಳಿಕೆ ಹೇಳಬೇಕು. ಸಾಧಾರಣವಾಗಿ ಮಗುವು ಒಂದು ಕೆಟ್ಟಕೆಲಸಮಾಡಿದರೆ "ಸಾಯಂಕಾಲ ನಿಮ್ಮ ತಂದೆಯವರು ಬರಲಿ; ಅವರಿಗೆ ಹೇಳಿ ನಿನಗೆ ತಕ್ಕ ಶಿಕ್ಷೆಮಾಡಿಸುತ್ತೇನೆ" ಎಂದು ತಾಯಿಯರು ಹೆದರಿಸುವು

ದುಂಟು. ಇದೂ ಸರಿಯಲ್ಲ. ಸಣ್ಣ ಮಗುವಾದರೆ ತಂದೆ ಬರುವಷ್ಟರಲ್ಲಿ ತಾನು ಮಾಡಿದ ತಪ್ಪನ್ನು ಮರೆತಿರುವುದು. ದೊಡ್ಡ ಮಗುವಾದರೆ ತನಗೆ ಯಾವ ಘೋರಶಿಕ್ಷೆ ಕಾದಿದೆಯೋ ಎಂದು ತಪಿಸುತ್ತಾ ತಂದೆ ಬರುವವರೆಗೂ ತನ್ನ ದೈನಂದಿನ ಕಾರ್ಯಗಳಲ್ಲಿ ನಿರುತ್ಸಾಹಿಯಾಗಿರುವುದು. ಆದುದರಿಂದ ತಪ್ಪು ಕೆಲಸಮಾಡಿದ ಒಡನೆಯೇ ಮಗುವಿಗೆ ಸರಿಯಾದ ಬುದ್ಧಿ ಕಲಿಸುವುದು ಉತ್ತಮ.

ಮಕ್ಕಳು ಯಾವುದಾದರೂ ತಪ್ಪುಮಾಡಿದಾಗ ನಮ್ಮ ಕೋಪವನ್ನು ವ್ಯಕ್ತಪಡಿಸಿ ಶಿಕ್ಷಿಸುವುದು ತಪ್ಪು. ಮಗುವು ಪುನಃ ಆ ಕೆಟ್ಟಕೆಲಸವನ್ನು ಮಾಡದಿರಲೆಂಬುದು ಶಿಕ್ಷೆಯ ಉದ್ದೇಶವೇ ಹೊರತು ಕೋಪಪ್ರದರ್ಶನವಲ್ಲ.

ಮಕ್ಕಳಿಗೆ ತಮ್ಮ ಸುತ್ತುಮುತ್ತಲಿನ ವಿಷಯಗಳನ್ನು ತಿಳಿಯ ಬೇಕೆಂಬ ಕುತೂಹಲ ಬಹುವಾಗಿರುತ್ತದೆ. ಈ ಕುತೂಹಲ ದಿಂದ ಅವರು ತಾಯಿತಂದೆಗಳನ್ನು ಪದೇ ಪದೇ ಪ್ರಶ್ನಿಸುವರು. ಮಕ್ಕಳ ಪ್ರಶ್ನೆಗಳನ್ನು ನಿರಾಕರಿಸದೆ, ಅವರು ಕೇಳಿದ ಸಮಯ ದಲ್ಲಿ ತಾಯಿತಂದೆಗಳು ತಮಗೆ ಗೊತ್ತಿರುವಷ್ಟನ್ನು ಅವರಿಗೆ ತಿಳಿಯುವ ಹಾಗೆ ಹೇಳಬೇಕು. ಆದರೆ ಇದು ಸುಲಭವಲ್ಲ; ನಮ್ಮ ಸಮಾಜದಲ್ಲಿ ತಾಯಿತಂದೆಗಳ ತಿಳಿವಳಿಕೆಯ ಮಟ್ಟವೇ ಕಡಮೆ. ಅಲ್ಲದೆ ಕೆಲವು ವಿಷಯಗಳನ್ನು ಕುರಿತು ಮಾತ ನಾಡಲು ಸಂಕೋಚ. ಆದುದರಿಂದ, ಅಜ್ಞಾನದಿಂದಲೋ ಅಥವಾ ಸಂಕೋಚದಿಂದಲೋ ಅವರು ಮಕ್ಕಳಿಗೆ ಸತ್ಯವನ್ನು ಹೇಳುವುದಕ್ಕೆ ಹಿಂಜರಿಯುವರು. ಈ ಕಾರಣಗಳಿಂದಲೇ ಉಪಾಧ್ಯಾಯರೂ ಸಹ ನಿಜಾಂಶವನ್ನು ಹೇಳುವುದಕ್ಕೆ ಹಿಂಜರಿ

ಯುವರು. ಸತ್ಯವನ್ನು ಹೇಳಿದರೆ ಊಹೆ ಅನುಮಾನಗಳು ಹೋಗುವುವು. ಇಲ್ಲದಿದ್ದರೆ ಇದರಲ್ಲಿ ಏನೋ ಗೂಢಾರ್ಥವಿದೆ ಯೆಂದು ಊಹಿಸಿ, ಅವನ್ನು ತಿಳಿಯುವ ಕುತೂಹಲವು ಅತಿಯಾಗುವುದು. ಇದರಿಂದ ಮಕ್ಕಳ ವರ್ತನೆಯಲ್ಲಿ ಒಂದು ಕೆಟ್ಟ ಪರಿಣಾಮವುಂಟಾಗುವುದು.

ಸಮಾಜದಲ್ಲಿ ಒಬ್ಬ ವ್ಯಕ್ತಿ ಒಳ್ಳೆಯ ರೀತಿಯಲ್ಲಿ ವರ್ತಿಸಬೇಕಾದರೆ ತನ್ನ ಭಾವೋದ್ರೇಕಗಳನ್ನು ಹತೋಟಿಯಲ್ಲಿಟ್ಟುಕೊಂಡು ಸಮಭಾವದಿಂದಿರಬೇಕು. ಭಯ, ಕೋಪ ಮೊದಲಾದ ಭಾವೋದ್ರೇಕಗಳನ್ನು ಹತೋಟಿಯಲ್ಲಿಡದೆ ಅವುಗಳ ಅಧೀನನಾದರೆ ಮನುಷ್ಯನು ಪಶುಗಳಿಗೆ ಸಮಾನನಾಗುವನು. ಮತ್ತೆ ಈ ಭಾವಗಳು ಯಾವನಲ್ಲಿ ಉದ್ರಿಕ್ತವಾಗುವುದಿಲ್ಲವೋ ಅವನು ಜಡಸ್ವಭಾವವುಳ್ಳವನು. ಸಮಾಜದಲ್ಲಿ ತಾನೂ ಒಬ್ಬ ವ್ಯಕ್ತಿಯೆನಿಸಿಕೊಳ್ಳಲು ಮನುಷ್ಯನಿಗೆ ಭಾವಗಳ ಪ್ರವೃತ್ತಿಯೂ ಇರಬೇಕು; ಅವುಗಳನ್ನು ಸಂಯಮ ಮಾಡುವ ಶಕ್ತಿಯೂ ಇರಬೇಕು. ಮನಸ್ಸ್ಥೈರ್ಯ ಹುಟ್ಟಬೇಕಾದರೆ ನಾವು ಮಕ್ಕಳನ್ನು ಚಿಕ್ಕಂದಿನಿಂದಲೂ ಸರಿಯಾದ ರೀತಿಯಲ್ಲಿ ಸಾಕಬೇಕು. ಅವರಲ್ಲಿ ಅನಾವಶ್ಯಕ ಹೆದರಿಕೆಗಳುಂಟಾಗಲು ಅವಕಾಶಕೊಡಬಾರದು. ಯಾವಾಗಲೂ ಮಕ್ಕಳನ್ನು ನಮ್ಮ ಅಧೀನದಲ್ಲೇ ಇಟ್ಟುಕೊಂಡು ಅವರ ವ್ಯಕ್ತಿತ್ವವನ್ನು ಹಾಳುಮಾಡಬಾರದು. ಅವರಲ್ಲಿ ಮುಂಗೋಪವಿಲ್ಲದ ಹಾಗೆ ನೋಡಿಕೊಳ್ಳಬೇಕು. ತಮ್ಮ ಕೆಲಸಗಳನ್ನು ಹರ್ಷದಿಂದಲೂ ಉತ್ಸಾಹದಿಂದಲೂ ಮಾಡುವ ಮನೋವೃತ್ತಿಯನ್ನು ಅವರಲ್ಲಿ ಅಭಿವೃದ್ಧಿಗೊಳಿಸಬೇಕು, ಅವರನ್ನು ಪದೇ ಪದೇ ಬಯ್ದು ಅವರಿಗೆ ನಮ್ಮಲ್ಲಿ ಭಯ, ಕೋಪ, ದ್ವೇಷ ಮುಂತಾದ ಭಾವೋದ್ರೇಕಗಳುಂಟಾಗ

ದಂತೆ ನೋಡಿಕೊಳ್ಳಬೇಕು. ಅವರನ್ನು ಚಿಕ್ಕವರೆಂದು ಉದಾಸೀನಮಾಡದೆ ಅವರು ನಮ್ಮ ಸಮಾನರೆಂಬ ಭಾವನೆಯಿಟ್ಟು ಅವರ ಬುದ್ಧಿ ವಿವೇಕಗಳನ್ನು ಅಭಿವೃದ್ಧಿಗೊಳಿಸಬೇಕು. ಚಿಕ್ಕಂದಿನಿಂದಲೂ ಜಾಗರೂಕತೆಯಿಂದ ಮಕ್ಕಳನ್ನು ಬೆಳಸಿದರೆ ಅವರು ದೊಡ್ಡವರಾದಮೇಲೆ ಚಿತ್ತ ಸ್ಥೈರ್ಯ, ಆತ್ಮಸಂಯಮಾದಿ ಗುಣಗಳುಳ್ಳ ವ್ಯಕ್ತಿಗಳಾಗಿ ಸಮಾಜದ ಏಳಿಗೆಗೆ ನೆರವಾಗುವರು.



೩೮. ಸುಭಾಷಿತ ಸಂಗ್ರಹಗಳು- ಎಂ. ಪಿ. ಲಕ್ಷ್ಮೀನೃಸಿಂಹಶಾಸ್ತ್ರೀ, ಎಂ.ಎ.

೩೯. ಮಕ್ಕಳ ಭಾವಜೀವನ- ಬಿ. ಕುಪ್ಪುಸ್ವಾಮಿ ನಾಯಿಡು, ಎಂ.ಎ.

೪೦. ಸಹಕಾರ- ಎಸ್. ಗೋಪಾಲಸ್ವಾಮಿ, ಎಂ.ಎ.

೧೯೪೨ ನೆಯ ಜುಲೈನಿಂದ ಮುಂದಕ್ಕೆ ಅಚ್ಚಾಗುವ ಪುಸ್ತಕಗಳ ಸಾಧಾರಣ ಪ್ರತಿ ೩ ಆಣೆ, ವಾರ್ಷಿಕ ಚಂದಾ (೯ ಪುಸ್ತಕಗಳಿಗೆ) ರೂ. ೧-೪-೦ ; ಉತ್ತಮ ಪ್ರತಿ ೪ ಆಣೆ; ವಾರ್ಷಿಕ ಚಂದಾ (೯ ಪುಸ್ತಕಗಳಿಗೆ) ರೂ. ೨-೦-೦.

ಸಂಪಾದಕ, ಪ್ರಚಾರಪುಸ್ತಕಮಾಲೆ,
ಯೂನಿವರ್ಸಿಟಿ ಆಫೀಸ್, ಮೈಸೂರು.